# ಕೊಡಗು  ಸಂಗಾತಿ

ಫೆಬ್ರವರಿ16 ರಿಂದ 28, 2001 ಪಾಕ್ಷಿಕ ಪತ್ರಿಕೆ (ಮಾಯಿ 4-16)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಯಲ್ಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 5 ಸಂಚಿಕೆ : 4 ಪುಟಗಳು : 24 ಬೆಲೆ ರೂ. : 6-00



**ಅತೀ ಮೇಲ್ಮಟ್ಟದಲ್ಲಿಯೂ ಕೆಳಮಟ್ಟದಲ್ಲಿಯೂ ನಾವು ಹಾರಬಲ್ಲೆವು
ಆದರೆ ನಿನಗದು ಸಾಧ್ಯವೇ ಎನ್ನುವಂತಿದೆ — ಈ ಹಂಸಗಳು**



# ಕೊಡಗು ಸಂಗಾತಿ ಚಂದದಾರರಿಗೊಂದು ಸುವಾರ್ತೆ
## ಲಾಟರಿ ಯೋಜನೆ ಡ್ರಾ ದಿನಾಂಕ 8-4-2001ಕ್ಕೆ

ಕೊಡಗು ಸಂಗಾತಿ ಪತ್ರಿಕಾ ಅಭಿವೃದ್ಧಿ ಬಯಸಿ ಲಾಟರಿ ಯೋಜನೆಯನ್ನು ಈ ಹಿಂದೆ ಹಮ್ಮಿಕೊಂಡಿದ್ದು ಅದನ್ನು ದಿನಾಂಕ 8-4-2001ಕ್ಕೆ ಮುಂದೂಡಲಾಗಿದೆ.. ಮಾನ್ಯ ಚಂದದಾರರು 31-3-2001ರ ಒಳಗಡೆ ಪತ್ರಿಕೆಯ ಚಂದವನ್ನು ತಪ್ಪದೇ ನವೀಕರಿಸಿಕೊಂಡವರ ಹೆಸರಿನಲ್ಲಿ ಮಾತ್ರ ಲಾಟರಿಯನ್ನು ಎತ್ತಲಾಗುವುದು. ನವೀಕರಣದ ವಾಯಿದೆ ದಿನಾಂಕವನ್ನು ಚಂದದಾರರ ವಿಳಾಸದ ಮೇಲ್ಭಾಗದಲ್ಲಿ ಪ್ರತಿ ಸಂಚಿಕೆಯಲ್ಲಿ ಕಾಣಿಸಿರುತ್ತೇವೆ.

### ಬಹುಮಾನಗಳು

1ನೇ ಬಹುಮಾನ : **¼ ಪವನ್ ಚಿನ್ನ**
2ನೇ ಬಹುಮಾನ : **1½ ಲೀ ಕುಕ್ಕರ್ 1**
3ನೇ ಬಹುಮಾನ : **ಸ್ಟೀಲ್ ಫ್ಲಾಸ್ಕ್ 1**
4ನೇ ಬಹುಮಾನ : **ಮಿಲ್ಕ್ ಕುಕ್ಕರ್ 1**
5ನೇ ಬಹುಮಾನ : **ದೋಸೆ ತವ 1**
6ನೇ ಬಹುಮಾನ : **ಗೋಡೆ ಗಡಿಯಾರ 1**
7ನೇ ಬಹುಮಾನ : **ಉತ್ತಮ ಪೆನ್ನು 1**
8ನೇ ಬಹುಮಾನ : **ರೋನಾಲ್ಡ್ ಪೆನ್ನುಗಳು 1 ಡಜನ್**
9ನೇ ಬಹುಮಾನ : **ರೋನಾಲ್ಡ್ ಪೆನ್ನುಗಳು ½ ಡಜನ್**
10ನೇ ಬಹುಮಾನ : **ಒಂದು ಸಂಗಾತಿ ಮೊಮೆಂಟೊ.**

ಚಂದದಾರರು ಹಣವನ್ನು ಈ ಕೆಳಗಿನ ವಿಳಾಸಕ್ಕೆ ನಗದು, ಎಂ.ಓ., ಡಿ.ಡಿ. ಮೂಲಕ ಕಳುಹಿಸುವುದು. ಮೈಸೂರಿನ ಸ್ಥಳೀಯ ಚೆಕ್‌ಗಳನ್ನು ಸ್ವೀಕರಿಸಲಾಗುವುದು. ಹಿತೈಷಿಗಳು ನವೀಕರಿಸುವುದಲ್ಲದೆ ವಾರ್ಷಿಕ ಚಂದ, ಜೀವಾವಧಿ ಸದಸ್ಯತನ (Rs. 2000/-), ಜಾಹೀರಾತು, ಚಿರಸ್ಮರಣೆ ಇತ್ಯಾದಿಯನ್ನು ನೀಡಿ ಸಹಕರಿಸುವಂತೆ ಮನಪೂರ್ವಕವಾದ ಕಳಕಳಿಯ ಪ್ರಾರ್ಥನೆ.

ಒಬ್ಬೊಬ್ಬ ಚಂದದಾರರು ಒಂದೊಂದು ಸದಸ್ಯರನ್ನು ನೊಂದಾಯಿಸಿದಲ್ಲಿ ಪತ್ರಿಕೆ ಅಭಿವೃದ್ಧಿ ಖಂಡಿತ ಸಾಧ್ಯವೆಂದು ನಾವು ಭರವಸೆ ನೀಡುತ್ತೇವೆ. ಪತ್ರಿಕೆ ನಿಮ್ಮದು, ಪತ್ರಿಕೆ ನಿಮ್ಮ ಮಗು, ಮಗುವಿನ ಲಾಲನೆ ಪಾಲನೆ ಚಂದದಾರರಿಗೆ ಸೇರಿದ ಕರ್ತವ್ಯವಾಗಿದೆ.

**ಸಂಪಾದಕಿ**

**ವಿಳಾಸ :** ಸಂಪಾದಕಿ, ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ
ಮೈಸೂರು - 570 012 ✆ : **0821 - 516771**

---



# 2001, ಫೆಬ್ರವರಿ 16 ರಿಂದ 28 ರ ತನಕ

ಒಳನೋಟ 




| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ | ಬೈತಡ್ಕ ಜಾನಕಿ ಬೆಳ್ಯಪ್ಪ,,ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
|  ಚಿಹ್ನೆ, ಹಸೆಮಣೆ/ಶುಭಾಶಯ ಕಾರ್ಡ್ಸ್ ಕ್ಯಾಸೆಟ್/ಕೀ ಚೈನ್ ಲಭ್ಯ | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/29620 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  ಬೆಂಗಳೂರು ಮಹಾನಗರ | ಅಮ್ಮಾಟೀರ ಪೊನ್ನಪ್ಪ, 20, 1ನೇ ಮೈನ್, 4ನೇ ಕ್ರಾಸ್, ಸಾಕಮ್ಮ ಗಾರ್ಡನ್, ಬಸವನಗುಡಿ, ಬೆಂಗಳೂರು - 04, ಫೋನ್ :080/6342822 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19,ಫೋನ್ : 080/6500946 |

**ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 6 ರೂ., ಅರ್ಧ ವಾರ್ಷಿಕ -75 ರೂ., ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.**

# ಸಂಪಾದಕೀಯ : 2001ಇಸವಿಯ ಜನಗಣತಿ

ಭಾರತ ಜಾತ್ಯಾತೀತ ರಾಷ್ಟ್ರವೆಂದು ಸಾರಿದ್ದರೂ ರಾಷ್ಟ್ರದ ಕೆಲವು ಆಗುಹೋಗುಗಳಲ್ಲಿ ಜಾತಿಯನ್ನು ಪೂರ್ತಿಯಾಗಿ ಬಿಟ್ಟು ಕೊಡಲಾಗಲಿಲ್ಲ. ಇದಕ್ಕೆ ಕಾರಣ ಇಲ್ಲಿನ ವೈವಿಧ್ಯತೆ. ಭಾರತದ ಸಂವಿಧಾನದಲ್ಲಿಯೂ ಜಾತಿಯ ಗುಂಪುಗಳಿಗೆ ಪ್ರಾತಿನಿಧ್ಯ ಕೊಡುವುದಕ್ಕಾಗಿ ಸಂವಿಧಾನದ 15(4) 16(4)ವಿಧಿಗಳಲ್ಲಿ ಹಿಂದುಳಿದ ಜಾತಿ, ಹಿಂದುಳಿದ ಪಂಗಡ, ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡಗಳ ಪಟ್ಟಿಯನ್ನು ಸರ್ಕಾರವೇ ರೂಪಿಸಿದ್ದು ಅವುಗಳ ಆಧಾರದ ಮೇಲೆ ಮೇಲ್ಕಂಡ ಜಾತಿ ಯಾ ಪಂಗಡಗಳ ವಿದ್ಯಾರ್ಥಿಗಳಿಗೆ ಹಾಗೂ ಸರ್ಕಾರಿ ಉದ್ಯೋಗಗಳಿಗೆ ಇಂತಿಂತಹ ಜಾತಿ ಯಾ ಪಂಗಡಗಳಿಗೆ ಶೇಕಡವಾರು ಸಂಖ್ಯೆಯನ್ನು ಕಾದಿರಿಸಲಾಗಿದೆ.

ಆದರೆ ಈ ರೀತಿ ಕಾಧಿರಿಸುವ ಸಮಯದಲ್ಲಿ ಸರ್ಕಾರಕ್ಕಾಗಲೀ ಅಥವಾ ಜನರಿಗಾಗಲೀ ಇಂತಿಂಥ ಜಾತಿಯ ಅಥವಾ ಪಂಗಡಗಳ ಸಂಖ್ಯೆ ಎಷ್ಟೆಷ್ಟೆಂದು ನಿಖರವಾಗಿ ಹೇಳುವುದಕ್ಕೆ ಸಾಧ್ಯವಿಲ್ಲ. ಕಾರಣವೇನೆಂದರೆ ಇತ್ತೀಚೆಗಿನ ಜನಗಣತಿಯಲ್ಲಿ ಜಾತಿವಾರು ಜನಗಣತಿ ನಡೆಸುತ್ತಿಲ್ಲ. ಸರ್ಕಾರವಾಗಲೀ ಹಿಂದುಳಿದ ಪಂಗಡಗಳ ಆಯೋಗವಾಗಲೀ ಜನಗಣತಿ ನಡೆಸುವಂತೆ ಮನೆ ಮನೆಗೆ ಭೇಟಿಕೊಟ್ಟು ಈ ಅಂಕಿ ಅಂಶಗಳನ್ನು ಶೇಖರಿಸುವುದಿಲ್ಲ. ಹೀಗಾಗಿ ಈ ಜಾತಿಗಳ ಅಂಕಿ ಅಂಶಗಳು ಬರೇ ಅಂದಾಜಿನ ಲೆಕ್ಕಾಚಾರವಾಗಿ ಬಿಟ್ಟಿವೆ. ಸರ್ಕಾರ ಪ್ರಕಟಿಸುತ್ತಿರುವ ಹಿಂದುಳಿದ ಪಂಗಡ ಜಾತಿ ಪರಿಶಿಷ್ಟ ಜಾತಿ ಯಾ ಪರಿಶಿಷ್ಟ ಪಂಗಡಗಳ ಸಂಪೂರ್ಣವಾದ ಅಂಕಿ ಅಂಶಗಳು ಲಭ್ಯವಿಲ್ಲದೆ ಪೂರ್ತಿಯಾಗಿ ಹಿಂದುಳಿದ ಜಾತಿ, ಪಂಗಡಗಳ ಹೆಸರೇ ಬಿಟ್ಟು ಹೋಗುವ ಪರಿಸ್ಥಿತಿ ಇದ್ದು ಇಂತಹ ಜಾತಿ ಯಾ ಪಂಗಡಗಳಿಗೆ ಸಂವಿಧಾನದ 15(4) 16(4) ವಿಧಿಯ ಪ್ರಕಾರ ಸರ್ಕಾರದಿಂದ ಸಿಗುವ ಸೌಲಭ್ಯ-ಸವಲತ್ತುಗಳು ಸಿಗದೇ ಹೋಗಿ ಅನ್ಯಾಯವಾಗುವ ಸಂದರ್ಭ ಇರುವುದರಿಂದ ಹತ್ತು ವರ್ಷಕ್ಕೊಂದಾವರ್ತಿ ನಡೆಸುತ್ತಿರುವ ಜನಗಣತಿಯಲ್ಲಿ ಪ್ರತೀ ಜಾತಿಯ ಹೆಸರನ್ನು ಹಾಗೂ ಜಾತಿಯ ಜನಸಂಖ್ಯೆಯನ್ನು ಕಾಣಿಸುವ ರೀತಿ ಮಾಡುವಂತೆ ಸಮಾಜದ ಧುರೀಣರು ರಾಜಕೀಯ ಪಂಗಡಗಳ ಮುಖಂಡರು, ಸಾಮಾಜಿಕ ತಜ್ಞರು ಸೇರಿ ಚಿಂತಿಸಿ ಏರ್ಪಾಡು ಮಾಡಿದರೆ ಪ್ರಜಾಪ್ರಭುತ್ವವುಳ್ಳ ನಮ್ಮ ದೇಶದ ಜನತೆಯ ಕಲ್ಯಾಣವನ್ನು ಸಾಧಿಸಿದಂತಾಗುವುದೆಂದು ಸಂಗಾತಿಯ ಅಭಿಲಾಶೆ.

---

# ಶಬ್ದ ಸ್ಥಳದಿಂದ ಸ್ಥಳಕ್ಕೆ ಹೇಗೆ ಸಂಚರಿಸುತ್ತದೆ ?

ನಮ್ಮ ಕಿವಿಗೆ ಕೇಳಿಬರುವುದನ್ನು ನಾವು 'ಶಬ್ದ' ಎನ್ನುತ್ತೇವೆ. ನಮ್ಮ ಕಿವಿಗಳಲ್ಲಿ ಸಂವೇದನೆಯನ್ನುಂಟುಮಾಡುವ ಗಲಾಟೆ ಯನ್ನು ವೈಜ್ಞಾನಿಕ ಭಾಷೆಯಲ್ಲಿ 'ಶಬ್ದ'ಎನ್ನುತ್ತೇವೆ. ಶಾಖ ಮತ್ತು ಬೆಳಕಿನಂತೆ, ಶಬ್ದವೂ ಶಕ್ತಿಯ ಒಂದು ರೂಪ. ಶಬ್ದ ಹೇಗೆ ಉಂಟಾಗುತ್ತದೆ? ಅದು ಸ್ಥಳದಿಂದ ಸ್ಥಳಕ್ಕೆ ಹೇಗೆ ಸಂಚರಿಸುತ್ತದೆ? ಬಲ್ಲಿರಾ?

ಒಂದು ವಸ್ತುವಿನ ಸ್ವಲ್ಪ ಭಾಗ ಅಥವಾ ಇಡೀ ಭಾಗ ಕಂಪನವಾದಾಗ ಶಬ್ದ ಉತ್ಪತ್ತಿಯಾಗುತ್ತದೆ. ನಾವು ಒಂದು ಗಂಟೆಯನ್ನು ಬಾರಿಸಿದಾಗ ಅದು ಶಬ್ದವನ್ನು ಉಂಟುಮಾಡುವ ಕಂಪನಗಳನ್ನು ನಾವು ಕೈಯ್ಯಿಂದ ಮುಟ್ಟಿ ನೋಡಿದರೆ ಈ ಕಂಪನಗಳು ವೇದ್ಯವಾಗುತ್ತವೆ. ಮನುಷ್ಯ ಮಾತನಾಡಿದಾಗ, ಅವನ ಗಂಟಲಿನೊಳಗಿರುವ ಧ್ವನಿ ಬಿಲ್ಲೆ (Diaphragm) ಕಂಪಿಸುತ್ತದೆ. ಕಂಪನಗಳಿಲ್ಲದೇ ಶಬ್ದ ಉತ್ಪತ್ತಿಯಾಗುವುದಿಲ್ಲ.

ಯಾವುದಾದರೊಂದು ವಸ್ತು ಕಂಪಿಸಿದಾಗ, ಅದರಿಂದ ಧ್ವನಿ ತರಂಗಗಳುಂಟಾಗಿ ಅವು ಯಾವುದಾದರೊಂದು ಮಾಧ್ಯಮದ ಮೂಲಕ ಚಲಿಸುತ್ತವೆ. ಈ ಕಂಪನಗಳು ನಮ್ಮ ಕಿವಿಯನ್ನು ಮುಟ್ಟಿ ದಾಗ, ನಾವು ಶಬ್ದ ಕೇಳುತ್ತೇವೆ. ನಮ್ಮ ಕಿವಿಗಳಿಗೆ 20ರಿಂದ 20,000 ಹರ್ಟ್ಸ್‌ವರೆಗಿನ ತರಂಗಾಂತರಗಳು ಉತ್ಪತ್ತಿ ಮಾಡುವ ಶಬ್ದ ಕೇಳಿಸುತ್ತದೆ. 20ಕ್ಕಿಂತ ಕಡಿಮೆ ಮತ್ತು 20,000 ಹರ್ಟ್ಸ್‌ಗಿಂತ ಹೆಚ್ಚು ತರಂಗಾಂತರವುಳ್ಳ ಶಬ್ದ, ನಮ್ಮ ಕಿವಿಗೆ ಕೇಳಿಸುವುದಿಲ್ಲ.

ಶಬ್ದ ಒಂದು ಜಾಗದಿಂದ ಇನ್ನೊಂದು ಜಾಗಕ್ಕೆ ತರಂಗ-ತರಂಗವಾಗಿ ಚಲಿಸಲು ಒಂದು ಮಾಧ್ಯಮ ಬೇಕೇ ಬೇಕು. ನಿರ್ವಾತ ಪರಿಸ್ಥಿತಿಯಲ್ಲಿ ಅದು ಚಲಿಸಲಾರದು. ಸರಳ ಪ್ರಯೋಗದಿಂದ ಈ ಅಂಶವನ್ನು ನಾವು ತಿಳಿಯಬಹುದು.

ತಳವಿಲ್ಲದ ಗಾಜಿನ ಶೀಶೆ ತೆಗೆದುಕೊಂಡು, ಅದಕ್ಕೂ ಒಂದು ವ್ಯಾಕ್ಯೂಂಪಂಪ್‌ಗಳೂ ಸಂಪರ್ಕಕಲ್ಪಿಸಿ ಶೀಶೆಯೊಳಗೆ ವಿದ್ಯುತ್ ಗಂಟೆಯನ್ನಿಟ್ಟು. ಅದಕ್ಕೂ ಮತ್ತು ಬ್ಯಾಟರಿಯೊಂದಕ್ಕೂ ಸಂಪರ್ಕ ಕಲ್ಪಿಸಿ. ಆಗ ಗಂಟೆ ಹೊಡೆಯಲಾರಂಭಿಸಿ, ಶಬ್ದ ನಮಗೆ ಸ್ಪಷ್ಟವಾಗಿ ಕೇಳಿಸುತ್ತದೆ. ಈಗ ವ್ಯಾಕ್ಯೂಂ ಪಂಪ್‌ನ ನೆರವಿನಿಂದ, ಶೀಸೆಯೊಳಗಿನ ಗಾಳಿಯನ್ನು ತೆಗೆದುಹಾಕಿ. ಗಾಳಿ ಕಡಿಮೆಯಾಗು ತ್ತಿದ್ದಂತೆ ಶಬ್ದವು ಕೇಳಿಸುವುದಿಲ್ಲ. ಶಬ್ದದ ಅಲೆಗಳು ಪ್ರಸರಣ ಗೊಳ್ಳಬೇಕಾದರೆ, ಒಂದು ಮಾಧ್ಯಮ ಇರಲೇಬೇಕೆಂಬುದು ಈ ಪ್ರಯೋಗದಿಂದ ತಿಳಿದುಬರುತ್ತದೆ.

ಇದರಿಂದ ಮೂರು ತೀರ್ಮಾನಗಳಿಗೆ ಬರಬಹುದು. ಮೊದಲನೆಯದು, ಕಂಪನಗಳು ಶಬ್ದವನ್ನುಂಟು ಮಾಡುತ್ತವೆ. ಎರಡನೆಯದು, ಶಬ್ದ ಅಲೆಗಳ ರೂಪದಲ್ಲಿ ಸಂಚರಿಸುತ್ತದೆ. ಮೂರನೆಯದು, ಶಬ್ದ ಪ್ರಸರಣವಾಗಲು ಒಂದು ಮಾಧ್ಯಮ ಅತ್ಯಗತ್ಯ.

ಸಂಗ್ರಹ : — ನೀಶಾ ಪಟ್ಟಡ.

---

ಪುಸ್ತಕ ಓದುವ ಹವ್ಯಾಸ ಉಳ್ಳವನು ಎಲ್ಲಿ ಹೋದರೂ ಸಂತೋಷವಾಗಿರಬಲ್ಲ. —ಗಾಂಧೀಜಿ

# ಅರೆಭಾಷೆ ಗೌಡರ ಸಂಸ್ಕೃತಿಯ ಒಂದು ವಾರೆನೋಟ

ಕೊಡಗಿನಲ್ಲಿ ಅರೆಗನ್ನಡ ಮಾತನಾಡುವ ಮತ್ತು ಕನ್ನಡವನ್ನು ಮನೆಮಾತನ್ನಾಗಿ ಬಳಸುವ ಎರಡು ಪಂಗಡಗಳಿವೆ. ಅರೆಗನ್ನಡವನ್ನು ಮಾತನಾಡುವ ಈ ಅರೆಭಾಷಿಕ ಗೌಡರು ಜಿಲ್ಲೆಯ ಒಟ್ಟು ಗೌಡರ ಸಂಖ್ಯೆ ಶೇಕಡ 60 ರಷ್ಟು ಇದ್ದಾರೆ. ಬಾಕಿ ಇರುವ ಒಕ್ಕಲಿಗ ಜನಾಂಗದವರು ಹೆಚ್ಚಾಗಿ ಸೋಮವಾರಪೇಟೆ ತಾಲೂಕಿನಲ್ಲಿ ಕಂಡು ಬರುತ್ತಾರೆ. ವೀರ ರಾಜೇಂದ್ರ ರಾಜನು ಸನ್ 1799ರ ನಂತರ 1806ರೊಳಗೆ ಆಗಿನ ವಿಶಾಲ ಕೊಡಗು ದೇಶದೊಳಗಿನ ಪ್ರದೇಶಗಳಿಂದ ಈಗಿನ ಕೊಡಗಿನ ಚಿಕ್ಕ ಜಿಲ್ಲೆಗೆ ಆಹ್ವಾನಿಸಿಕೊಂಡಿರುವ ವಿಚಾರ ಎಲ್ಲವರಿಗೆ ತಿಳಿದಿರುವುದು ಸರಿಯಷ್ಟೆ. ಆದರೆ ಅರೆಗನ್ನಡ ಮಾತನಾಡುವ ಗೌಡರನ್ನು ಪಶ್ಚಿಮ ಘಟ್ಟದ ಕೆಳಗಿನ ಸುಳ್ಯ ಪುತ್ತೂರು ತಾಲೂಕುಗಳಿಂದ ತಂದಿದ್ದಾವೆಂಬುದಕ್ಕೆ ಚರಿತ್ರಾಧಾರಗಳಿವೆ. ಒಕ್ಕಲಿಗ ಗೌಡರನ್ನು ಹಾಸನ ಜಿಲ್ಲೆಯ ತಾಲೂಕುಗಳಿಂದ ತಂದು ತಳವೂರಿಸಿದ್ದಾನೆ. ಭಾಷೆ ಮಾತ್ರವಲ್ಲ ಕೆಲವು ಸಂಪ್ರದಾಯಗಳಲ್ಲಿ ಇವರೊಳಗೆ ಸ್ವಲ್ಪ ವ್ಯತ್ಯಾಸಗಳಿವೆ. ಹತ್ತು ಕುಟುಂಬ ಹದಿನೆಂಟು ಗೋತ್ರಗಳಾಗಿ ವೃದ್ಧಿ ಹೊಂದುತ್ತಿರುವ ಅರೆಭಾಷೆ ಗೌಡರು ತಮ್ಮ ಸಂಪತ್ಭರಿತ ಸಂಸ್ಕೃತಿಯನ್ನು ಅಂದಿನ ಕಾಲದಿಂದ ಇಂದಿನ ನವ ಪೀಳಿಗೆಯ ತನಕ ಯಾವ್ಯಾವ ಕ್ಷೇತ್ರದಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಅಳಿಸಿ ಹೋಗಿದೆಯಾ ಅಥವಾ ಅಳಿಯುವ ಅಂಚಿನಲ್ಲಿದೆಯೊ ಎಂಬ ಈ ಅವಲೋಕನ ನಮ್ಮ ಸಂಪ್ರದಾಯಗಳ (ಹುಟ್ಟಿನಿಂದ) ಸಾವಿನತನಕ ಇರುವ ಒಂದು ಪಕ್ಷಿನೋಟ.

ಗೌಡರು ಭೂಮಿ ಒಡೆಯರು ಶ್ರಮ ಜೀವಿಗಳು ಬಂಜರು ಬಿದ್ದಿದ್ದ ಸಾವಿರಾರು ಭಟ್ಟಿ ಭೂಮಿಯನ್ನು ಗುಂಪುಗುಂಪಾಗಿ ಕರೆತಂದ ಪ್ರತೀ ಗಂಡಾಳಿಗೆ ರಾಜನು ಹಂಚಿಕೊಟ್ಟು, ಸಕಲ ಸಹಕಾರವನ್ನು ಒದಗಿಸಿದ್ದು ಇನಾಮೆಯಲ್ಲಿ ಕಾಣುತ್ತೇವೆ. ರಾಜಭಕ್ತಿಯನ್ನು ಉಳಿಸಿಕೊಂಡು ಬಂದ ನಮ್ಮ ತಾತ, ಮುತ್ತಾತಂದಿರು ಒಗ್ಗಟ್ಟಿನಲ್ಲೇ ಬಾಳಿ ಬದುಕಿದವರು. ಊರು ಗೌಡ ಜ್ಞಾನಗೌಡನಂತೆ ಊರೊಳಗಿನ ಸರ್ವಗೌಡ ಜನರನ್ನು ತನ್ನ ಸ್ವಂತ ಬಳಗದವರಂತೆ ಕಾಣುತ್ತಿದ್ದನು. ಹಿರಿಯರು ಈಗಿನವರಷ್ಟು ವಿದ್ಯೆ ಕಲಿಯುವುದಿರಲಿ ಶಾಲೆಗಳೇ ಇಲ್ಲದಿದ್ದ ಆ ಕಾಲದಲ್ಲಿ ವಿದ್ಯಾರ್ಜನೆ ಕೈಗೆ ಎಟುಕದ ಮಾತು. ಆದರೂ ಬುದ್ದಿ ಶಾಲಿಗಳಾಗಿದ್ದರೆಂಬುದಕ್ಕೆ ಅವರು ಕಟ್ಟಿ ವಾಸಿಸುತ್ತಿದ್ದ ಮನೆರಚನೆಗಳೇ ಸಾಕ್ಷಿ. ಎತ್ತರದ ದಳ, ಚಿಕ್ಕ ಕಿಟಕಿ, ಇಳಿತಗ್ಗಿನ ಸೂರು, ಚಳಿಗಾಳಿ ಮಳೆಗಳನ್ನು ಎದುರಿಸಲು ಸಾಮರ್ಥ್ಯವನ್ನು ಹೊಂದಿದ್ದುವು. ಅವರು ಒಗ್ಗಟ್ಟಿನ ಬಾಳ್ವೆ ಮಾಡುತ್ತಿದ್ದಾರೆಂಬುದಕ್ಕೆ ದೊಡ್ಡ ಮನೆಗಳ ಅಚ್ಚು ಕಟ್ಟಿನ ರಚನೆ, ನೆಲ್ಲಕ್ಕಿ ಬಾಡೆ, ಉಂಬೊಳಗೆ, ಐಮಾರಗಳು, ಗೋಡೆಗಂಬಗಳ ಜೋಡಣೆಗಳು ಇಂದೂ ನಮ್ಮನ್ನು ಚಕಿತಗೊಳಿಸದಿರವು. ಸತ್ಯ ಧರ್ಮಗಳನ್ನು ಅನುಭವಿಸಿ ಸಹಬಾಳ್ವೆಗೆ ಬೆಲೆಕೊಟ್ಟು ಒಗ್ಗಟ್ಟಿನಲ್ಲಿ ಬಲವಿದೆ ಎಂದು ತಮ್ಮ ನಿತ್ಯದ ಜೀವನದಲ್ಲಿ ಕಂಡಿದ್ದರು. ಜನನಾಗರೀಕತೆಯು ಜನಸಂಖ್ಯೆಯೊಂದಿಗೆ ಹೆಚ್ಚು ಹೆಚ್ಚು ಮೂಡುತ್ತಾ ಧರಿಸುವ ಉಡುಪು ವಾಸದ ನೆಲೆ ಮಾದರಿಯ ಆಹಾರ ಸೇವೆಗಳು ಭೌಗೋಳಿಕತೆಯನ್ನು ಕಾಣುತ್ತಿವೆ. ಶತಮಾನಗಳು ಕಳೆದರೂ ಮೂಲಸಂಸ್ಕೃತಿಯ ಮೇಲೆ ಅನ್ಯ ಸಂಸ್ಕೃತಿಗಳ ಹೇರು ಒತ್ತಡಗಳು ಬಿದ್ದಿಲ್ಲ. ಇದೊಂದೇ ಹೆಮ್ಮೆಯ ಮಾತು.

ಕೌಟುಂಬಿಕ ಜೀವನ ದೊಡ್ಡ ಸಂಸಾರ ನೂರಾರು ಎಕ್ರೆ ವಿಸ್ತೀರ್ಣವಿದ್ದ ಆಸ್ತಿ, ದಟ್ಟಕಾಡುಗಳಿಂದ ಕೂಡಿದ ಕಾಡುಜಾಗ, ಬಂಜರು ಬಿದ್ದಿದ್ದ ಭತ್ತದ ಭೂಮಿಯಲ್ಲಿ ವರ್ಷವಿಡೀ ದುಡಿತ ಪರಸ್ಪರ ಒಗ್ಗಟ್ಟಿನಿಂದ ಸಮ ಆಳುಲೆಕ್ಕದಿಂದ ಕೆಲಸಕಾರ್ಯಗಳನ್ನು ಮುಗಿಸುತ್ತಿದ್ದರು. ಒಕ್ಕಲು ಯಜಮಾನ (ಪಟ್ಟೆದಾರ)ನಿಗೆ ತನ್ನ ಒಕ್ಕಲಿನ ಏಳ್ಗೆಯ ಬಯಕೆಯಲ್ಲಿ ನಿಸ್ವಾರ್ಥಿಯ ಅಧಿಕಾರಗಳು ಸಾಕಷ್ಟು ಇದ್ದುವು. ಯಜಮಾನಿಕೆ ಎಂದರೆ ಕಾನೂನು ಕಾಯಿದೆಗಳ ಪರಿಧಿಯಲ್ಲಿ ತನ್ನ ಕುಟುಂಬದ ಸರ್ವಸದಸ್ಯರುಗಳಿಗೆ ನ್ಯಾಯವನ್ನು ಒದಗಿಸಿಕೊಡಿಸುತ್ತಿದ್ದನು. ಊರು ಗೌಡ, ನಾಡ್‌ಗೌಡ ಪಟೇಲರುಗಳೊಂದಿಗೆ ನೇರಾ ಸಂಪರ್ಕವಿಟ್ಟುಕೊಂಡಿದ್ದು, ಸರಕಾರಕ್ಕೆ ಸಲ್ಲಬೇಕಾದ ತೆರಿಗೆ ಕಂದಾಯ ಬಾಪ್ತಿನ ಹಣವು ಸಕಾಲದಲ್ಲಿ ಶಿಸ್ತಿನಿಂದ ಸಲ್ಲಿಸಲಾಗುತ್ತಿತ್ತು. ರೈತರೇ ದೇಶಕ್ಕೆ ಬೆನ್ನೆಲುಬು ಇದ್ದಂತೆ ಒಕ್ಕಲು ಯಜಮಾನರು ಊರಿನ ಆಧಾರಸ್ತಂಭಗಳಂತೆ. ಕುಟುಂಬದಲ್ಲಿ ಬರುವ ಸಕಲ ಶುಭ ಅಶುಭ ಕಾರ್ಯಗಳ ಸಂಪ್ರದಾಯಗಳು ಹಿರಿಯವನ ವಿಜ್ಞಾಪನೆ ಅಡಿಯಲ್ಲಿ ನಡೆಯಲೇ ಬೇಕೆಂಬ ನಿಯಮವಿತ್ತು. ಆತನ ಮಾತನ್ನು ಮೀರುವ ಧೈರ್ಯ ಇತರರಿಗೆ ಇರುತ್ತಿರಲಿಲ್ಲ. ಅಕಸ್ಮಾತ್ತಾಗಿ ಮೀರಿದರೆ ಆತನನ್ನು ಪರಂಬಡಿ ಇಡುತ್ತಿದ್ದರು. ಪರಂಬಡಿ ಎಂದರೆ ಪ್ರತ್ಯೇಕಿಸುವುದು. ಮುಂದೆ ಯಾವ ಸಹಕಾರ ದೊರೆಯದಂತೆ ಮಾಡುವುದು. ಹುಟ್ಟು ಸಾವುಗಳು ಸೇರಿದಂತೆ ನಾನಾ ಕಾರ್ಯಗಳಿಗೆ ಸಕಾಲದಲ್ಲಿ ಹಾಜರಿದ್ದು ಮೇಲ್ವಿಚಾರಣೆ ವಹಿಸಿಕೊಳ್ಳಬೇಕಿತ್ತು. ಹಬ್ಬ ಹರಿದಿನಗಳನ್ನು ಆಚರಿಸುವಲ್ಲಿ ಅಂಧಚಾರವೆಂದು ಈಗಿನ ಪೀಳಿಗೆಯವರು ಭಾವಿಸಿದರೂ ಅಂದಿನ ಕಾಲದಲ್ಲಿ ಶಿಸ್ತು, ಭಕ್ತಿ, ಭಾವಗಳು, ಪ್ರೀತಿ ವಿಶ್ವಾಸ, ದಯೆ ದಾಕ್ಷಿಣೆ ಅನುಕಂಪಗಳು ಮನೆ ಮಾಡಿದ್ದುವು. ಎರಡು ಶತಮಾನಗಳ ಹಿಂದೆ ನೆಲೆಯೂರಿದ ನಮ್ಮ ಮೂಲ ಕುಲಪುರುಷ ರಾಜಭಕ್ತಿ ದೇಶಭಕ್ತಿಯೆಂದು ಆತನಿಗೆ ಎರಡು ಬಗೆಯದೆ ನಿಷ್ಠಾವಂತ ಪ್ರಜೆಯಾಗಿ 'ಕಣ್ಣುಕಟ್ಟಿ ಕಾಡಿಗೆ ಬಿಟ್ಟಂತೆ' ಈ ಕಾವೇರಿ ತಾಯಿಯ ಮಡಿಲಲ್ಲಿ ಇತರ ಜನಾಂಗದ ಪ್ರಜೆಗಳೊಂದಿಗೆ ಕಲೆತು ಮೂಲಸಂಸ್ಕೃತಿಯನ್ನು ಕಾಪಾಡಿಕೊಂಡು ಬರಲು ಎಷ್ಟೊಂದು ಸಂದಿಗ್ಧ ಸನ್ನಿವೇಶಗಳನ್ನು

---

ಪ್ರಪಂಚವು ಅದ್ಭುತವಾದ ಪುಸ್ತಕ, ಆದರೆ ಅದನ್ನು ಓದಲು ಬಾರದವನಿಗೆ ಅದು ನಿರುಪಯುಕ್ತ —ಕಾರ್ಲೋ ಗೋಲ್ಡೋನಿ.

ಎದುರಿಸಿದ್ದಾರೋ?! ಮಗುವಿನ ನಾಮಕರಣ ಋತುಶಾಂತಿ ಲಗ್ನ ಮದುವೆ ಕಾರ್ಯಗಳು (3ದಿನ) ಶವಸಂಸ್ಕಾರಗಳನ್ನು ಕ್ರಮಬದ್ಧವಾಗಿ ಆಚರಿಸುತ್ತಿದ್ದರು. ಗೌಡಧಾರೆಯ ಕ್ರಮ ಹಾಗೂ ಉಡುಪಿನ ಸಂಪ್ರದಾಯಗಳು ದಕ್ಷಿಣ ಕನ್ನಡ ಜಿಲ್ಲೆಯ ನಮ್ಮ ಅರೆಭಾಷೆಗೌಡರ ಸಂಪ್ರದಾಯಗಳಲ್ಲೇ ಮುಂದುವರಿಯುತ್ತಿದ್ದಾದರೂ, ರಾಜರೂ ಕೊಟ್ಟಗೌರವದ ಉಡುಪುಗಳಲ್ಲಿ (ಬಿಳಿಕುಪ್ಪಸದಟ್ಟಿ, ರುಮಾಲು) ಮುಂದೆ ಬದಲಾವಣೆಯಾಗಿದೆ. ಮದುವಣಿಗ ಉಡುಪು ಬಿಳಿಕೋಟು, ಹಾರವಕಚ್ಚೆಪಂಚೆ, ರುಮಾಲು, ಬಾಸಿಂಗ, ಗಟ್ಟಿಬಳೆ, ಪತ್ತಾಕ್ ಇತ್ಯಾದಿಗಳನ್ನು ಧರಿಸುತ್ತಿದ್ದನು. ಮದುಮಗಳು ಗೇಂಟಿಗೆ ಸೀರೆ, ಮುಂದೆನೆರಿಗೆ, ಉದ್ದಕೈರವಕೆ ತಲೆಗೆ ಮುಸುಕ(ಚಿನ್ನದ ಪಟ್ಟಿಯ ಕೋರು ವಸ್ತ್ರ)ವನ್ನು ಧರಿಸಿ ಅಲಂಕೃತಳಾಗಿರುತ್ತಿದ್ದಳು. ಈ ಉಡುಗೆ ತೊಡುಗೆಗಳಲ್ಲಿ ಈಗಲೂ ಹೆಚ್ಚಿನ ವ್ಯತ್ಯಾಸವಿಲ್ಲದೆ ಮದುವಣಿಗನು ಅದೇ ಉಡುಪು ಧರಿಸಿ ಅಲಂಕೃತನಾಗಿರುತ್ತಾನೆ. ಆದರೆ ಸುಮಾರು 60ವರ್ಷಗಳಿಂದೀಚೆ ಮದುಮಗಳು ಕನ್ನಡಸೀರೆ ಕ್ರಮದಲ್ಲಿ ಬದಲಾಗಿದ್ದಾಳೆ. ಹಿಂದೆ ಊರುಗೌಡರು ನಾಡುಗೌಡರು ಇದ್ದು ನಾಗರೀಕತೆ ಮುಂದುವರಿದಂತೆ ಅವರ ಅಧಿಕಾರಗಳು ಕಮ್ಮಿಯಾದಂತೆ ದಿ. ನಿಡ್ಯಮಲೆ ಮುದ್ದಪ್ಪ ನವರಂತಹ ಗಣ್ಯ ವ್ಯಕ್ತಿಯವರು ನಮ್ಮ ಬಡಬಾಯಿ ಅವಿದ್ಯಾವಂತ ಹಿರಿಯರನ್ನು ತಿದ್ದಿ ಕೆಲವು ಸಾಮಾಜಿಕ ಸಮಸ್ಯೆಗಳನ್ನು ತಿದ್ದಲು ಸಹಕರಿಸಿ, ಮದುಮಗಳ ಉಡುವ(ಉಡುಪಿನ) ಕ್ರಮ ಅಲ್ಲಿಂದೀಚೆ ಬದಲಾಗಿ ಮುಂದುವರಿದುಕೊಂಡು ಬಂದಿದೆ. ಧಾರೆ ಶಾಸ್ತ್ರ ಹೆಣ್ಣಿಗೆ ಶ್ರೇಷ್ಠ. ಹೆಣ್ಣೇ ಸಿರಿದೇವತೆ, ಆ ಶಾಸ್ತ್ರ ಕನ್ನಡಸೀರೆ ಉಡುವ ಕ್ರಮ ವಿಜಯನಗರ ಸಾಮ್ರಾಜ್ಯದ ಅರಸರ ಕಾಲಕ್ಕಿಂತಲೂ ಹಿಂದಿನಿಂದ ಅನುಸರಿಸಿಕೊಂಡು ಬಂದಿದ್ದಾರೆ.

ಮದುವೆ ಕಾರ್ಯಗಳು ಹಿಂದೆ 3ದಿನ ನಡೆಯುತ್ತಿತ್ತು. ಈಗ ದಂಪತಿ ಮುಹೂರ್ತ ಸಮಾಜಗಳಲ್ಲಿ ಒಂದೇ ದಿನಗಳ ಕಾರ್ಯಕ್ರಮದಲ್ಲಿ ಮುಗಿಯುತ್ತದೆ. ಪುರಾತನ ಕಾಲದಲ್ಲಿ ಬ್ರಾಹ್ಮಣರ ಪದ್ಧತಿ, ಊಟ ಇದ್ದಂತಹದ್ದು, ಇಲ್ಲಿ ನೆಲೆಯೂರಿ 2ತಲೆಮಾರುಗಳನಂತರ ಇಲ್ಲಿನ ರೀತಿಯ ಊಟೋಪಚಾರಗಳಿಗೆ ಮಾರು ಹೋಗಬೇಕಾಯಿತು. ಶ್ರಮ ಜೀವಿಗಳಾಗಿ ಯೋಧರೆನಿಸಿಕೊಂಡ ನಮ್ಮ ಹಿರಿಯ ಪುರುಷರು ಮಾಂಸಹಾರಿಗಳಾಗಿ ಪರಿವರ್ತನೆಗೊಂಡದ್ದರಲ್ಲಿ ಆಶ್ಚರ್ಯವಿಲ್ಲ. ಭೌಗೋಳಿಕ ಬದಲಾವಣೆ ಇದಕ್ಕೆ ಕಾರಣ. ಒಕ್ಕಲು ಯಜಮಾನ ಸೋದರಮಾವ ಊರುಗೌಡಗಳಿಗೆ ವಿಶೇಷ ಅಧಿಕಾರವಿತ್ತು.

ಇಂದಿನ ದಿನಗಳಲ್ಲಿ ಹಳೆ ಐನ್‌ಮನೆಗಳು ಕೆಲವೊಂದು ಕುಟುಂಬದಲ್ಲಿ ಕಾಣಸಿಗುತ್ತವೆ. ನೆಲ್ಲಕ್ಕಿ ದೀಪ ಇಡುವ ಪರಿಪಾಟ, ಅಂಗಳ ಗುಡಿಸುವ ಈ ಕಟ್ಟಾಟಗಳಲ್ಲಿ ಐನ್ ಮನೆಗಳು ಬಿದ್ದಿವೆ. 'ಕಾರಣೋವರ' ಕೊಂಬಾರೆ ಎಂದು ಮೀದಿ ಇಡಲು ಮಾತ್ರ ಐನ್‌ಮನೆಗಳನ್ನು ಇಟ್ಟುಕೊಟ್ಟಿದ್ದಾರೆ. ಮದುವೆಗಳನ್ನು ಸಮಾಜದಲ್ಲೇ ಆಚರಿಸಲಾಗಿ ತುಂಬಾ ಶಾಸ್ತ್ರ ಸಂಪ್ರದಾಯಗಳು ಕಾಡುಹತ್ತಿವೆ. ಉಡುಗೆಗಳಂತೂ ಹೇಳತೀರದು. ಗಂಡಸರೇ ತಮ್ಮ ಉಡುಪಿನ ವೈಶಿಷ್ಟ್ಯಗಳನ್ನು ಕಳೆಯುತ್ತಾ ಬಂದಿದ್ದಾರೆ. ಆಯಾ ಶಾಸ್ತ್ರಗಳನ್ನು ಮಾಡುವಲ್ಲಿ ಇಂತಹದೇ ಉಡುಪಿನಲ್ಲಿ ಗಂಡಸರು ಅಥವಾ ಹೆಂಗಸರು ಕಾಣಬೇಕೆಂಬ ನಿಯಮ ವಿದ್ದರೂ, ಗಂಡಸರು ತುಂಬಾ ದೂರಹೋಗುತ್ತಿದ್ದಾರೆ. ಇದು ಯಾರ ಸಂಸ್ಕೃತಿ, ಯಾವ ಜನಾಂಗದ ಮದುವೆ ಎಂದು ಗುರುತಿಸಲೂ ಕಷ್ಟವಾಗಿದೆ. ನಮ್ಮ ಸಂಸ್ಕೃತಿಯು ಹದ್ದು ಮೀರಿ ಹೋಗುತ್ತಿರುವುದು ನಾಗರೀಕರಣದ ನೆಪದಲ್ಲಿ ನಗರೀಕರಣ ಆಗುವ ನಮ್ಮವರಿಗೆ ಸಮಾಜದ ಹಿರಿಯ ಗಣ್ಯವ್ಯಕ್ತಿಗಳ ಮಾರ್ಗದರ್ಶನವಿಲ್ಲದಿರುವುದೆ ಕಾರಣ.

ಮುಂದೆ ಇದೇ ರೀತಿ ನಾವು ಹಿಡಿತ ತಪ್ಪಿದ ಸಮಾಜದ ಪ್ರಜೆಗಳಾದರೆ ಯಾವ ಜನಾಂಗದವರೆಂದು ಗುರುತಿಸಿಕೊಳ್ಳಲಾಗುವುದಿಲ್ಲ ಖಂಡಿತ. ಸಮಾಜದ ಅಧ್ಯಕ್ಷರೂ, ಸಾಂಸ್ಕೃತಿಕ ಅಕಾಡಮಿ ಅಧ್ಯಕ್ಷರೂ, ಮಹಿಳಾ ಒಕ್ಕೂಟದ ಅಧ್ಯಕ್ಷೆಯರೂ, ಚಿಂತಕರೂ ಒಂದೇ ವೇದಿಕೆಯಲ್ಲಿ ಈ ವಿಚಾರಗಳ ಬಗ್ಗೆ ಚರ್ಚಿಸಿ ಕಾರ್ಯೋನ್ಮುಖರಾದರೆ ಒಳ್ಳೆಯದು. ಈ ಪೀಳಿಗೆಯವರು ಚೆನ್ನಾಗಿ ಅರ್ಥೈಸಿಕೊಂಡು ಆ ನಿಟ್ಟಿನಲ್ಲಿ ಸ್ಥಾಪಿಸಿರುವ ಸಾಂಸ್ಕೃತಿಕ ಅಕಾಡಮಿಗೆ ಒಂದು ಅರ್ಥಬರುತ್ತಿತ್ತು. ಶಾಸಕಾಂಗದಂತೆ ಈ ಅಕಾಡೆಮಿಯ ಕೆಲಸ ಮಾಡಬೇಕು. ಸಭ್ಯತೆ ಶಿಸ್ತು ಪಾಲನೆಗಳು, ಕುಡಿತದಲ್ಲಿ ಮಿತಿ ಇದ್ದರೆ ಶಾಸ್ತ್ರೋಕ್ತವಾಗಿ ಸಾಂಪ್ರದಾಯಿಕ ರೀತಿಯ ನಮ್ಮ ಎಲ್ಲಾ ಆಚರಣೆಗಳಿಗೆ ಮೆರಗು ಬಂದು ನಾವು ಹೆಮ್ಮೆಯಿಂದ ನಮ್ಮ ಮುಂದಿನ ಪೀಳಿಗೆಗೆ ಸಂಸ್ಕೃತಿಯ ನಂದಾದೀವಿಗೆಯನ್ನು ಹಚ್ಚಿ ದಾರಿ ತೋರಿಸಿ ಕೊಟ್ಟಂತಾಗುವುದು.

— ಬೈತಡ್ಕ ಎ. ಬೆಳ್ಯಪ್ಪ, ಮಡಿಕೇರಿ.

---

## ನಮ್ಮ ಜನ - ಭಾಷೆ

ಈ ನಾಡು ಚಿನ್ನ, ಈ ಮಣ್ಣು ಚಿನ್ನ
ಕೊಡಗೇ ಅಂದ, ಸಿರಿ ಸೊಬಗೇ ಚೆಂದ
ಇರುವವರು ಎಲ್ಲಾ ಭಿನ್ನ ಭಿನ್ನ
ಅದರಲ್ಲಿ ಗೌಡ ಬಾಂದವರೇ ಚೆನ್ನ
ಭಾಷೆಯಲ್ಲಿ ಅರೆಭಾಷೆಯೇ ಚೆನ್ನ ಭಿನ್ನ

ಗಳಿಸುತಿಹರು ನಮ್ಮ ಜನ ದೇಶ ವಿದೇಶಗಳಲ್ಲಿ ಕೀರ್ತಿಯನ್ನ
ಎಲ್ಲೆಲ್ಲೂ ಕಾಣಸಿಗಬೇಕು ನಮ್ಮ ಜನ
ಶ್ರಮಿಸಬೇಕು ಒಗ್ಗೂಡಿ
ಹರಸಬೇಕು ಮುಂದೆ ಬರುವವರನ್ನು
ಹಿಡಿಯಬೇಕು ಕೀರ್ತಿ ಪತಾಕೆಯನ್ನು

— ಮುಕ್ಕಾಟಿರ ಎನ್ ರವಿಕುಮಾರ್ ಕೆ. ಆರ್. ನಗರ

---

ಮನುಷ್ಯನಿಂದ ಮನುಷ್ಯ ಹುಟ್ಟುವ ಹಾಗೆಯೇ ಪುಸ್ತಕದಿಂದ ಪುಸ್ತಕ ಹುಟ್ಟುತ್ತದೆ. —ವಿ.ಕೃ. ಗೋಕಾಕ್.

# ಮನು ಸ್ಮೃತಿಯ ಪ್ರಕಾರ ವರ್ಣ ಸಂಕರಗಳು

ಆದಿಕಾಲದಲ್ಲಿ ಪ್ರಚಲಿತವಿದ್ದ ನಾಲ್ಕು ವರ್ಣಗಳು ಕೇವಲ ಸಾಮಾಜಿಕ ಕಾರಣಗಳಿಗಾಗಿ ಮಾತ್ರ. ಆಗ ಪಂಚಮ ಎಂಬ ಜಾತಿಯು ಇರಲಿಲ್ಲ. ಕಾಲ ಕ್ರಮೇಣ ಸಾವಿರಾರು ಉಚ್ಛ, ನೀಚ ಜಾತಿಗಳು ಹುಟ್ಟಿಕೊಂಡವು. ಈ ಜಾತಿಯ ಉತ್ಪತ್ತಿಗೆ ಕೆಲವು ಸಾಮಾಜಿಕ ಕಟ್ಟು ಕಟ್ಟಳೆಯನ್ನು ಮೀರಿ ಉಂಟಾದರೆ, ಬಹುಪಾಲು ಉಚ್ಛ, ನೀಚ ಜಾತಿಯ ಮದುವೆ ಮತ್ತು ಅನೈತಿಕ ಸಂಭಂಧದಿಂದ ಹುಟ್ಟುವ ಸಂತಾನದಿಂದ ಉಂಟಾಗಿದೆ. ಇದಕ್ಕೆ ಸ್ಪಷ್ಟ ಕಾರಣಗಳು ಮನು ಸ್ಮೃತಿಯಲ್ಲಿದೆ.

ಅತ್ಯಂತ ಪ್ರಾಚೀನ ಗ್ರಂಥವಾದ ಮನು ಸ್ಮೃತಿಯನ್ನು, ಮನುವು ಹೇಳಿದಂತೆ ಭೃಗು ಋಷಿಯು ಬರೆದನು. ಮಾನವನಾದ ವನು ತನ್ನ ಜೀವಿತ ಕಾಲದಲ್ಲಿ ಒಮ್ಮೆಯಾದರೂ ಈ ಸ್ಮೃತಿಯನ್ನು ಓದಿ ತಿಳಿದು ಕೊಂಡರೆ ಪ್ರಪಂಚದಲ್ಲಿ ಇಂದು ನಡೆಯುತ್ತಿರುವ ಎಷ್ಟೊ ದುರಾಚಾರಗಳು ಕಡಿಮೆಯಾಗುತ್ತಿದ್ದವು. ರಾಮ ರಾಜ್ಯವಲ್ಲದಿದ್ದರೂ ಶಾಂತಿಯುತ ಜೀವನವನ್ನಂತು ಖಂಡಿತಾ ನಡೆಸಬಲ್ಲರು. ಹಲವಾರು ವಿಷಯಗಳು ಮನಸ್ಸಿಗೆ ಕಸಿವಿಸಿ ಯನ್ನುಂಟು ಮಾಡಿದರೂ, ನಿಧಾನವಾಗಿ ಮನನ ಮಾಡಿದಾಗ ಇಂತಹ ಉತ್ಕೃಷ್ಟ ಕೃತಿ ಜಗತ್ತಿನಲ್ಲಿ ಇನ್ನೊಂದು ಸಿಗಲಾರದು ಎನಿಸದಿರದು. ಮನು ಉಕ್ತ ಭೃಗುವಿನ ರಚನೆ ನಿಜವಾಗಿಯೂ ಬರಿ ಸ್ಮೃತಿಯಲ್ಲ. ಇದೊಂದು ಮಾನವ ಜೀವಿಯ ಬಲಿಷ್ಠ, ಪ್ರಭುದ್ಧ, ಪುರಾತನ ಸಂವಿಧಾನವೇ ಸರಿಯೆನಿಸುವುದು. ಇದು ಪುರಾತನವಾದರೂ ಸರ್ವಕಾಲಿಕ.

ಸಜಾತಿಯ ಸ್ತ್ರೀ ಪುರುಷರ ಸಂಬಂಧದಿಂದ ಜನಿಸಿದ ಸಂತಾನ ಸಜಾತೀಯವಾಗಿರುತ್ತದೆ. ವಿಜಾತೀಯ ಸ್ತ್ರೀ ಪುರುಷ ಸಂಬಂಧ ಮತ್ತು ಒಂದೇ ಗೋತ್ರದ ಸಂಬಂಧ (ಅಣ್ಣಾ ತಂಗಿ ಸಂಬಂಧ) ದಿಂದ ವರ್ಣ ಸಂಕರ (ಉಚ್ಛ, ನೀಚ,) ಉಂಟಾಗುವುದು. ವರ್ಣ ಸಂಕರದಲ್ಲಿ ಅನುಲೋಮ ಮತ್ತು ಪ್ರತಿಲೋಮಗಳೆಂದು ಎರಡು ವಿಧ

*ಅನುಲೋಮ ಕ್ರಮ :* ಉತ್ತಮ ಪುರುಷ ಮತ್ತು ನೀಚ (ಕೆಳವರ್ಗ)ಸ್ತ್ರೀ ಅಂದರೆ ಬ್ರಾಹ್ಮಣ ಪುರುಷನು ತನ್ನ ಕೆಳಗಿನ ಮೂರು ವರ್ಣ(ಕ್ಷತ್ರಿಯ, ವೈಶ್ಯ ಮತ್ತು ಶೂದ್ರ) ದಲ್ಲಿನ ಸ್ತ್ರೀಯನ್ನು ವರಿಸಿದರೆ ಅವರಿಂದುಂಟಾದ ಸಂತತಿ. ಕ್ಷತ್ರಿಯ ಪುರುಷನು ತನ್ನ ಕೆಳಗಿನ ಎರಡು ವರ್ಣ(ವೈಶ್ಯ, ಶೂದ್ರ) ದವಳನ್ನು ವರಿಸಿದಾಗ ಉಂಟಾದ ಸಂತತಿ. ಮತ್ತು ವೈಶ್ಯ ಪುರುಷನು ತನ್ನ ಕೆಳಗಿನವಳಾದ ಶೂದ್ರಳನ್ನು ಹೊಂದುವುದರಿಂದುಂಟಾದ ಸಂತತಿ, ಇವುಗಳನ್ನು ಅನುಲೋಮ ಕ್ರಮವೆಂದು ಇದರಿಂದ ಸ್ವಲ್ಪ ದೋಷವು ಇದ್ದರೂ, ಸ್ತ್ರೀ ಮಾನ್ಯಳು ಮಾತೃಸಮಾನಳೂ ಆದ್ದರಿಂದ ಇದರಿಂದ ಉಂಟಾದ ಸಂತತಿಗಳಿಂದ, ನೀಚ ಜಾತಿಯಲ್ಲಿಯೇ ಮೇಲ್ವರ್ಗದವರೆನಿಸುವರು.

*ಪ್ರತಿಲೋಮ ಕ್ರಮ:* ಶೂದ್ರ ಪುರುಷನು ತನ್ನ ಮೇಲಿನ ವರ್ಣ ವೈಶ್ಯ, ಕ್ಷತ್ರಿಯ, ಬ್ರಾಹ್ಮಣ) ಕನ್ಯೆಯರನ್ನು ವರಿಸಿದಾಗ ಉಂಟಾದ ಸಂತತಿ ವೈಶ್ಯ ಪುರುಷನು, ತನ್ನ ಮೇಲಿನ ಎರಡು ವರ್ಣ(ಕ್ಷತ್ರಿಯ, ಬ್ರಾಹ್ಮಣ) ಕನ್ಯೆಯರನ್ನು ಮದುವೆಯಾಗು ವುದರಿಂದುಂಟಾದ ಸಂತತಿ. ಕ್ಷತ್ರಿಯ ಪುರುಷನು, ಬ್ರಾಹ್ಮಣ ಕನ್ಯೆಯಲ್ಲಿ ಅನುರಕ್ತನಾದಾಗ ಉಂಟಾದ ಸಂತತಿ ಇವುಗಳನ್ನು ಪ್ರತಿಲೋಮ ಕ್ರಮವೆಂದೂ ಇದರಿಂದ ಉಂಟಾದ ವರ್ಣ ಸಂಕರಗಳು ಅತೀ ನೀಚ ಜಾತಿಯೆಂದು ಪರಿಗಣಿಸಲ್ಪಡುತ್ತದೆ. ಈಗ ಕೆಲವು ಜಾತಿಗಳ ಹೆಸರುಗಳನ್ನು ನೋಡೋಣ.

ಬ್ರಾಹ್ಮಣ ಪುರುಷನಿಗೆ ಕ್ಷತ್ರಿಯ ಸ್ತ್ರೀಯಲ್ಲಿ ಜನಿಸಿದ ಪ್ರಜೆಯು ಪಿತೃ ಸಮಾನವೆಂದೂ ಸ್ತ್ರೀಯು ನಿಕೃಷ್ಟಳಾದ್ದರಿಂದ ಸ್ವಲ್ಪ ದೋಷವಿದ್ದರೂ, ಪಿತೃಕಾರ್ಯ ಯೋಗ್ಯರಾಗಿರುತ್ತಾರೆ. ಬ್ರಾಹ್ಮಣನಿಗೆ ವೈಶ್ಯಳಲ್ಲಿ ಜನಿಸಿದರೆ ಅಂಬಷ್ಠನೆಂದು ಕರೆಯಲ್ಪಡುವನು. ಮುಂದೆ ಅವನಿಗೆ ಅವನ ಜಾತಿ (ಇದೇ ರೀತಿ ವರ್ಣ ಸಂಕರದಿಂದ ಜನಿಸಿದ)ಯ ಕನ್ಯೆಯ ಮುಖಾಂತರ ಅಂಬಷ್ಠ ಜಾತಿ ಉಂಟಾಗುವುದು. ಅದೇರೀತಿ ಕ್ಷತ್ರೀಯನಿಂದ ಶೂದ್ರಳಲ್ಲಿ ಕ್ರೂರನಾದ ಉಗ್ರನೂ, ಬ್ರಾಹ್ಮಣನಿಗೆ ಉಳಿದ ಮೂರರಲ್ಲಿ ಕ್ಷತ್ರೀಯನಿಗೆ ಉಳಿದ ಎರಡರಲಿ ವೈಶ್ಯರಿಗೆ ಶೂದ್ರರಲ್ಲಿ ಕ್ರಮವಾಗಿ ಜನಿಸಿದ ಆರು ಮಂದಿ ಸಂತತಿಯನ್ನು ಅಪಸರು ಎನ್ನುವರು. (ಅಂದರೆ ಸ್ವಲ್ಪ ದೋಷ) ಕ್ಷತ್ರೀಯನಿಗೆ ಬ್ರಾಹ್ಮಣ ಸ್ತ್ರೀಯಲ್ಲಿ ಸಂಜಾತನು ಸೂತನು, ವೈಶ್ಯನಿಗೆ ಕ್ಷತ್ರಿಯಳಲ್ಲಿ ಮಾಗಧನು ಬ್ರಾಹ್ಮಣಳಲ್ಲಿ ವೈದೇಹನು, ಶೂದ್ರನಿಗೆ ವೈಶ್ಯಳಲ್ಲಿ ಆಯೋಗವನು, ಕ್ಷತ್ರಿಯಳಲ್ಲಿ ಕ್ಷತ್ರ, ಬ್ರಾಹ್ಮಣಳಲ್ಲಿ ಚಂಡಾಲನು (ಗಮನಿಸಿ ಅತಿ ನೀಚ ಜಾತಿಯ ಪುರುಷ ಮತ್ತು ಅತಿ ಉಚ್ಚಜಾತಿಯ ಸ್ತ್ರೀಯೊಡನೆ ಸಂಬಂಧ ದಿಂದ, ಚಂಡಾಲನ ಉತ್ಪತ್ತಿ ಅಂದರೆ ಪಂಚಮರಿಗಿಂತಲೂ ನೀಚ ಸಂತತಿ) ಅನುಲೋಮ ಏಕಾಂತರ ವಿವಾಹದ ಅಂಬಷ್ಠರು ಉಗ್ರರಂತೆ, ಪ್ರತಿಲೋಮ ಕ್ಷತ್ರ ವೈದೇಹರು ಸ್ಪರ್ಶಯೋಗ್ಯರು ಉಪನಯನ ವೇದಾಧ್ಯಯನ ಇಲ್ಲದ ಸ್ತ್ರೀಯಲ್ಲಿ ಜನಿಸಿದರೆ ಅವರು ವೇದ ಬಾಹ್ಯರಾಗಿರುತ್ತಾರೆ.

ನಂತರದ ಜಾತಿಯ ಪರಿವರ್ತನೆ ನೋಡಿ, ಬ್ರಾಹ್ಮಣನಿಗೆ ಉಗ್ರ ಕನ್ಯೆಯಲ್ಲಿ ಆವೃತನೂ ಅಂಬಷ್ಠಳಲ್ಲಿ ಆಭೀರನೂ ಆಯೋಗನಿಯಲ್ಲಿ ಧಿಗ್ವಣನೂ. ಶೂದ್ರ ಸಂಜಾತ ಆಯೋಗದ ಕ್ಷತ್ರ ಚಂಡಾಲರು ಮನುಷ್ಯರಲ್ಲಿ ಅಧಮರು, ಪುತ್ರಫಲ ಇವರಿಂದ ಇಲ್ಲ. ಮಾಗಧ ವೈದೇಹ, ಸೂತರು ಮತ್ತೊಂದು ವಿಧದ ಅಪಸದರು. ನಿಷಾದನಿಂದ ಶೂದ್ರಳಲ್ಲಿ ಪುಕ್ಕಸನು ಶೂದ್ರನಿಂದ ನಿಷಾದ ಸ್ತ್ರೀಯಲ್ಲಿ ಕುಕ್ಕುಟನು. ಕ್ಷತ್ರನಿಂದ ಉಗ್ರಳಲ್ಲಿ ಶ್ವಪಾಕನು ವೈದೇಹನಿಂದ ಅಂಬಷ್ಠಯಲ್ಲಿ ವೇಣನು. ಶುದ್ಧ ವರ್ಣದಲ್ಲಿರುವವರು ಕಾಲಕಾಲಕ್ಕೆ ಉಪನಯನ ಸಂಸ್ಕಾರ ಶೂನ್ಯರಾದರೆ ಅವರೂ ವ್ರಾತ್ಯರು ಪುತ್ರ ಕಾರ್ಯ ಅಯೋಗ್ಯ ರಾಗಿರುತ್ತಾರೆ. ಬ್ರಾಹ್ಮಣ ವ್ರಾತ್ಯನ ಸಂತತಿಗೆ ಭೂರ್ಜ, ಕಂಟಕ,

10 ನೇ ಪುಟಕ್ಕೆ

# ಅಮರ ಸುಳ್ಯದ ದಂಗೆ : ಗೌಡರುಗಳ ಪಾತ್ರ

— ಡಾ. ಪುರುಷೋತ್ತಮ ಬಿಳಿಮಲೆ

ಕ್ರಿ. ಶ. ಸು 1500ರಲ್ಲಿ ಸುಳ್ಯ ಪರಿಸರಕ್ಕೆ ವಲಸೆ ಬಂದು ನೆಲೆ ನಿಂತ ಗೌಡ ಜನಾಂಗದವರು ಕ್ರಿ.ಶ. 1830 ರಷ್ಟಾಗುವಾಗ ಬಹುಸಂಖ್ಯಾತರಾಗಿದ್ದರು. ಹಾಗಾದುದರಿಂದಲೇ ಅಮರ ಸುಳ್ಯದ ದಂಗೆಯಲ್ಲಿ ಇವರಿಗೆ ನಿರ್ಣಾಯಕ ಪಾತ್ರವಹಿಸುವುದಕ್ಕೆ ಸಾಧ್ಯವಾಯಿತು. ಸುಳ್ಯ ಪರಿಸರದ ಗೌಡ ಜನಾಂಗದ ಇತಿಹಾಸದಲ್ಲಿ ಅಮರ ಸುಳ್ಯದ ದಂಗೆ ಒಂದು ರೋಚಕವಾದ ಅಧ್ಯಾಯ. ಈ ದಂಗೆಯ ಬಗ್ಗೆ ಈಗಾಗಲೇ ಡಿ. ಎನ್. ಕೃಷ್ಣಯ್ಯ (ಕೃಷ್ಣಯ್ಯ 1974). ಎ. ಆರ್. ಶಗ್ರಿತ್ತಾಯ (ಶಗ್ರಿತ್ತಾಯ, 1956) ನಿರಂಜನ (ನಿರಂಜನ 1960) ಮೊದಲಾದವರು ಬರೆದಿದ್ದಾರೆ. ಒಟ್ಟು ಹೋರಾಟದ ಬಗ್ಗೆ ಇವರ ಲೇಖನಗಳು ಸಾಕಷ್ಟು ಮಾಹಿತಿಯನ್ನು ನೀಡುವುದಾದರೂ ಗೌಡರುಗಳು ಒಟ್ಟು ಹೋರಾಟದ ಮುಂಚೂಣಿಯಲ್ಲಿದ್ದುದನ್ನು ಅವರ್ಯಾರೂ ಗುರುತಿಸುವುದಿಲ್ಲ. ಪ್ರಕೃತ ಲೇಖನದಲ್ಲಿ ಅದನ್ನು ಗುರುತಿಸಲು ಯತ್ನಿಸಲಾಗುವುದು.

**ದಂಗೆಗೆ ಕಾರಣಗಳು**

1. ಐಗೂರು ಪ್ರಾಂತದಿಂದ ಸುಳ್ಯಕ್ಕೆ ಗೌಡರು ಬರುವಾಗ ಅವರು ಇಕ್ಕೇರಿ ಸಂಸ್ಥಾನದ ಪ್ರಜೆಗಳಾಗಿದ್ದರು. ಕ್ರಿ.ಶ. 1700ರಲ್ಲಿ ಸುಳ್ಯ ಸೀಮೆ ಕೊಡಗಿನ ಸಂಸ್ಥಾನಕ್ಕೆ ವರ್ಗಾಯಿಸಲ್ಪಟ್ಟಾಗ ಈ ಗೌಡರುಗಳೂ ಕೊಡಗರಸನ ಆಧೀನಕ್ಕೆ ಬಂದರು. (ತಿ. ತಾ. ಶರ್ಮ 1957) ಪ್ರಾಮಾಣಿಕರೂ ದುಡಿಮೆಗಾರರೂ ಆದ ಈ ಗೌಡರು ಕೊಡಗರಸನಿಗೆ ನಿಷ್ಠೆಯಿಂದಿದ್ದರು. ಇದರಿಂದಾಗಿ ಕೊಡಗಿನ ಅರಸರೂ ಗೌಡರ ಬಗ್ಗೆ ಅಭಿಮಾನ ತಾಳಿದ್ದರು. 1834 ಏಪ್ರಿಲ್ 11ರಂದು ಕರ್ನಲ್ ಫ್ರೇಸರನು ಕೊಡಗನ್ನು ವಶಪಡಿಸಿಕೊಂಡ ಮತ್ತು ಆಡಳಿತದ ಅನುಕೂಲಕ್ಕಾಗಿ ಕೊಡಗು ಸಂಸ್ಥಾನಕ್ಕೆ ಸೇರಿದ್ದ ಸುಳ್ಯ ಸೀಮೆಯನ್ನು ಬೇರ್ಪಡಿಸಿ ಮಂಗಳೂರಿಗೆ ಸೇರಿಸಿದ. (ಕೃಷ್ಣಯ್ಯ 1974, ಪು 357) ವ್ಯಾವಹಾರಿಕವಾಗಿ ಅವರು ಮಾಡಿದ್ದು ಸರಿಯಾಗಿತ್ತು. ಆದರೆ ಹಾಲೇರಿ ಮನೆತನಕ್ಕೆ ನಿಷ್ಠರಾಗಿದ್ದ ಸುಳ್ಯ ಪರಿಸರದ ಗೌಡರು ಇದರಿಂದ ಅಸಮಾಧಾನಗೊಂಡರು. ಬ್ರಿಟಿಷರ ಒಡೆದು ಆಳುವ ನೀತಿ ಗೌಡರಿಗೆ ತಿಳಿದದ್ದು ಹೀಗೆ. ಕ್ರಿ. ಶ. 1834 ಅಕ್ಟೋಬರ್ 21ರಂದು ನಡೆದ ಈ ಘಟನೆಯಿಂದ 'ಅಮರ ಸುಳ್ಯದ ದಂಗೆ' ಆರಂಭವಾಗುತ್ತದೆ.

2. ದಂಗೆಗೆ ಕಾರಣವಾದ ಇನ್ನೊಂದು ಘಟನೆ ಹೀಗಿದೆ. ಕೊಡಗರಸನಿಗೆ ಗೌಡರುಗಳು ಧಾನ್ಯರೂಪದಲ್ಲಿ ತೆರಿಗೆ ಕೊಡುತ್ತಿದ್ದರು. ಬ್ರಿಟಿಷರ ಹೊಸ ನೀತಿಗನುಸಾರವಾಗಿ ಈಗ ಹಣದ ರೂಪದಲ್ಲಿ ತೆರಿಗೆಯನ್ನು ಸಲ್ಲಿಸಬೇಕಾಗಿತ್ತು. ಇದಕ್ಕಾಗಿ ಧಾನ್ಯವನ್ನು ವ್ಯಾಪಾರಿಗಳಿಗೆ ಕೊಟ್ಟು, ಹಣಪಡೆದು ಬ್ರಿಟಿಷರಿಗೆ ಒಪ್ಪಿಸಬೇಕಾಗಿತ್ತು. ಕೃಷಿಕರಾಗಿದ್ದ ಗೌಡರಿಗೆ ಇದರಿಂದ ತುಂಬ ನಷ್ಟವಾಗಿ ವರ್ತಕರಿಗೆ (ವರ್ತಕರು ಹೆಚ್ಚಾಗಿ ಕೊಂಕಣಿಗಳಾಗಿದ್ದರು) ಲಾಭವಾಗುತ್ತಿತ್ತು. ಇದೂ ಗೌಡರ ಅಸಮಾಧಾನಕ್ಕೆ ಕಾರಣವಾಯಿತು.

3. ಬ್ರಿಟಿಷರ ಆಪ್ತ ದಿವಾನನಾಗಿದ್ದ ಲಕ್ಷ್ಮೀನಾರಾಯಣನ ಅಣ್ಣನಾದ ರಾಮಪ್ಪಯ್ಯನು ಸುಳ್ಯ ಪೇಟೆಗೆ ಸಮೀಪದಲ್ಲಿರುವ ಅಟ್ಲೂರಿನಲ್ಲಿದ್ದ. ಭೂಮಾಲಕನಾದ ಈತ ಕ್ರೂರಿಯೂ ಸ್ತ್ರೀಲಂಪಟನೂ ಆಗಿದ್ದ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನನಗೆ ತಿಳಿದು ಬಂದಂತೆ ಈತ ಬ್ರಿಟಿಷ್ ಅಧಿಕಾರಿಗಳಿಗೆ ಹೆಣ್ಣುಗಳನ್ನು ಒದಗಿಸಿ ಕೊಡುತ್ತಿದ್ದನಂತೆ. ಇವನ ದರ್ಪಕ್ಕೆ ಅನುಗುಣವಾಗಿ ಜನರು ಇವನನ್ನು 'ಅಟ್ಲೂರು ದೊರೆ'ಯೆಂದು ಕರೆಯುತ್ತಿದ್ದರಂತೆ. ಬಿಳಿ ಕುದುರೆಯ ಮೇಲೇರಿ ಆತ ಸವಾರಿ ಹೋಗುತ್ತಿದ್ದ ರೀತಿಯ ಬಗ್ಗೆ ಕಾಂತಮಂಗಲದ ಜನರು ಇಂದೂ ಆಡಿಕೊಳ್ಳುತ್ತಾರೆ. ಇವನಿಗೂ ಬ್ರಿಟಿಷರಿಗೂ ಇದ್ದ ಸ್ನೇಹಚಾರದಿಂದಾಗಿ ಸ್ಥಳೀಯ ಜನರು ಈ ರಾಮಪ್ಪಯ್ಯನ ಬಗ್ಗೆಯೂ, ಅವನ ಸ್ನೇಹಿತರಾಗಿದ್ದ ಬ್ರಿಟಿಷರ ಬಗ್ಗೆಯೂ ಕೋಪಗೊಂಡರು.

4. ದಂಗೆಗೆ ಇನ್ನೊಂದು ಮುಖ್ಯ ಕಾರಣವೆಂದರೆ ಕರ್ನಲ್ ಫ್ರೇಸರನ ವರ್ತನೆ. ಆತ ಸ್ಥಳೀಯ ಜನರನ್ನು ಪ್ರೊಟೆಸ್ಟೆಂಟ್ ಮತಕ್ಕೆ ಸೇರಿಸಲು ಉದ್ದೇಶಿದಂತೆ ತೋರುತ್ತದೆ. ಮೆಕ್ಕಾರ್ಟಿಮ್‌ಗೆ 1834ರಲ್ಲಿ ಆತ ಬರೆದ ಪತ್ರದಿಂದ ಇದು ಸ್ಪಷ್ಟವಾಗುತ್ತದೆ. (ಕೃಷ್ಣಯ್ಯ, 1974, ಪು.537) ಹಿಂದೂ ಧರ್ಮದ ಅನುಯಾಯಿಗಳೆಲ್ಲರೂ ಇದರಿಂದ ಬೇಸತ್ತಿದ್ದಾರೆ.

ಮೇಲಿನ ನಾಲ್ಕು ಪ್ರಾಮುಖ್ಯ ಕಾರಣಗಳಿಂದಾಗಿ ಸುಳ್ಯ ಪರಿಸರಧ ಗೌಡರುಗಳು ಬ್ರಿಟಿಷರ ವಿರುದ್ಧ ಹೋರಾಡಲು ತೀರ್ಮಾನ ಕೈಗೊಂಡಿರಬೇಕು. ಬಹು ಸಂಖ್ಯಾತರಾಗಿದ್ದ ಅವರು ಕೈಗೊಂಡ ತೀರ್ಮಾನಗಳಿಗೆ ಅಲ್ಪಸಂಖ್ಯಾತರಾಗಿದ್ದ ಬಂಟರು, ಬಿಲ್ಲವರು, ಮಲೆಕುಡಿಯರು, ಒಪ್ಪಲೇಕಾಗಿತ್ತು.

**ದಂಗೆ : ಮೊದಲ ಹಂತ**

1834ರಲ್ಲಿ ಕೊಡಗು ಸಂಸ್ಥಾನ ಬ್ರಿಟಿಷರಿಗೆ ಸೇರಿದ ಅನಂತರ ಅಸಮಾಧಾನಗೊಂಡ ಸುಳ್ಯ ಸೀಮೆಯ ಜನಕ್ಕೆ ದಂಗೆಯೇಳಲು ಪ್ರಬಲವಾದ ಒಂದು ಕಾರಣ ಬೇಕಾಗಿತ್ತು. ಒಳಗೊಳಗೇ ಕುದಿಯುತ್ತಿದ್ದ ಆ ಜನಕ್ಕೆ ಒಂದು ವರುಷದ ಅನಂತರ ದಂಗೆಯೇಳಲು ನೆವನವೊಂದು ಸಿಕ್ಕಿತು. ಅದೆಂದರೆ ಕ್ರಿ. ಶ. 1835ರ ಮಾರ್ಚಿ ತಿಂಗಳಿನಲ್ಲಿ ಸುಳ್ಯ ಪರಿಸರದಲ್ಲಿ ಒಬ್ಬ ಸನ್ಯಾಸಿ ಪ್ರತ್ಯಕ್ಷನಾದ. ಆಗ ಸುಳ್ಯ ಸೀಮೆಗೆ ಕಟ್ಟೆಮನೆಯಾಗಿದ್ದ ಕೂಜುಗೋಡಿನಲ್ಲಿ ಆತ ಉಳಿದುಕೊಂಡು ತಾನು ಅಪರಂಪರನೆಂದೂ, ಲಿಂಗರಾಜೇಂದ್ರ ಒಡೆಯನ ಅಣ್ಣ ಅಪ್ಪಾಜಿ ಅರಸನ ಮಗನೆಂದೂ, ನ್ಯಾಯವಾಗಿ ಕೊಡಗಿನ ಸಿಂಹಾಸನ ತನಗೆ ಸೇರಬೇಕೆಂದೂ ಹೇಳಿದ. ಕಟ್ಟೆ ಮನೆಯ ಅಧಿಕಾರ ವಹಿಸಿದ್ದ ಅಪ್ಪಯ್ಯ ಗೌಡ ಅದನ್ನು ನಂಬಿ, ತನ್ನ ಕಡೆಯ ಗೌಡರಿಗೆಲ್ಲ ಹೇಳಿಕಳುಹಿಸಿದ. ಕಟ್ಟೆಮನೆಯವನಲ್ಲವಾದರೂ ಅಷ್ಟೇ ಘನಸ್ಥಿಕೆ ಉಳಿಸಿಕೊಂಡ ಕೆದಂಬಾಡಿ ರಾಮಗೌಡ ಕಟ್ಟೆಮನೆಗೆ ಬಂದ. ಸುಳ್ಯ, ಪೆರಾಜೆ, ಅರಂತೋಡು, ಚೆಂಬು, ಚೊಕ್ಕಾಡಿ ಬೆಳ್ಳಾರೆ, ಪಂಜ, ಬಳ್ಪ, ಮೊದಲಾದ ಕಡೆಯಿಂದ ಬಂದ ಗೌಡ ಪ್ರಮುಖರು ಈ ಅಪರಂಪಾರನ ಪರವಾಗಿ ಹೋರಾಡಲು ನಿಶ್ಚಯಿಸಿದರು. ಆದರೆ ಈ ಸಿದ್ಧತೆ ಕ್ಯಾ||ಲೀ ಹಾರ್ಡಿಗೆ ತಿಳಿದು

ಪುಸ್ತಕ ಪ್ರೇಮವಿಲ್ಲದವನು ಹಣವಂತನಾದರೂ ದರಿದ್ರನೇ. —ಲಾಂಗ್ಫೋರ್ಡ್

ಹೋದದ್ದರಿಂದ ಸದ್ಯಕ್ಕೆ ದಂಗೆಯನ್ನು ನಿಲ್ಲಿಸಲಾಯಿತು. ಕೂಜುಗೋಡಿನಿಂದ ಬಿಸಿಲೆಘಾಟಿಗಾಗಿ ಸೋಮವಾರ ಪೇಟೆಗೆ ಹೋಗುತ್ತಿದ್ದ ಅಪರಂಪಾರನನ್ನು ಲೀಹಾರ್ಡಿಯ ಸೈನಿಕರು ಬಂಧಿಸಿ ಸೆರೆಮನೆಗೆ ತಳ್ಳಿದರು. ಸುಳ್ಯ ಪರಿಸರದ ಅನೇಕರಿಗೆ ಈ ಘಟನೆ ತಿಳಿಯಲಿಲ್ಲವಾದರೂ ಗೌಡ ಪ್ರಮುಖರಿಗೆ ಇದು ತಿಳಿಯಿತು. ಅವರು ಅಪರಂಪಾರ ಸೆರೆಗೆ ಹೋದದ್ದನ್ನು ಬಹಿರಂಗ ಪಡಿಸಲಿಲ್ಲ. ಏಕೆಂದರೆ ಅಪರಂಪರ ಸೆರೆಗೆ ತಳ್ಳಲ್ಪಟ್ಟ ವಿವರದಿಂದ ಗೌಡರು ಧೃತಿಗೆಡಬಹುದಾಗಿತ್ತು. ಆದುದರಿಂದ ಅಪರಂಪಾರನ ಬಂಧನ ಕೆಲವರಿಗಷ್ಟೇ ತಿಳಿದಿತ್ತು.

ಏನಿದ್ದರೂ ಅಪರಂಪರನ ಬಂಧನದಿಂದ ಒಮ್ಮೆಗೆ ಆರಂಭವಾಗಬೇಕಾಗಿದ್ದ 'ದಂಗೆ' ಸ್ಥಗಿತಗೊಂಡಿತು. ಆರಂಭದಲ್ಲಿ ಹೀಗೆ ಹಿನ್ನಡೆಗೊಂಡ ದಂಗೆ ತೋರಿಕೆಗೆ ವಿಫಲವಾದರೂ ಅಂತರ್ಯದಲ್ಲಿ ಎಷ್ಟು ಸಾಧಿಸಬೇಕೋ ಅಷ್ಟನ್ನು ಸಾಧಿಸಿದೆ. ಕೊನೇ ಪಕ್ಷ ತವ್ಮುಷ್ಟಕ್ಕೇ ದುಡಿಯುತ್ತಿದ್ದ ಸ್ಥಳೀಯರನ್ನು ಒಂದುಗೂಡಲು ಅದು ಹೇಳಿಕೊಟ್ಟಿದೆ.

**ದಂಗೆ : ಎರಡನೇ ಹಂತ**

ಅಪರಂಪರನು ಬಂಧಿತನಾದರೂ ಸುಳ್ಯ ಪರಿಸರ ದಲ್ಲಿ ಆತ ಉರಿಸಿದ ಕಿಡಿ ಆರಲಿಲ್ಲ.

ಕೂಜುಗೋಡು ಅಪ್ಪಯ್ಯ ಗೌಡನೂ ಕೆದಂಬಾಡಿ ರಾಮಗೌಡನೂ ಒಟ್ಟು ಸೇರಿ ಹೋರಾಟವನ್ನು ಮುಂದುವರಿಸಲು ಇಚ್ಛಿಸಿದರು. ಅವರು ಶನಿವಾರ ಸಂತೆಯ ಬಳಿಯಲ್ಲಿ ವಾಸಿಸುತ್ತಿದ್ದ ಪುಟ್ಟ ಬಸಪ್ಪ ಎಂಬವನನ್ನು ಕರೆದುಕೊಂಡು ಬಂದು 'ಇವನು ಅಪ್ಪಾಜಿ ಅರಸನ ಮಗನಾದ ನಂಜುಂಡಪ್ಪ'ನೆಂದು ಸಾರಿದರು. ಹೋರಾಟದ ದಾರಿಯಲ್ಲಿ ಅವನನ್ನು ಕಲ್ಯಾಣ ಸ್ವಾಮಿಯೆಂದು ಕರೆಯಬೇಕೆಂದು ನಿರ್ಧರಿಸಿದರು. ಈ ಕೆಲಸ ಮಾಡಿದವನು ಹುಲಿ ಕಡಿದ ನಂಜಯ್ಯ. ಈ ಕಲ್ಯಾಣಪ್ಪನ ಯೋಗಕ್ಷೇಮದ ಹೊರೆ ಹೊತ್ತವನು ಕೆದಂಬಾಡಿ ರಾಮಗೌಡ, ಈತ ತನ್ನ ಮನೆಯಿಂದ ಪಶ್ಚಿಮ ದಿಕ್ಕಿಗೆ ಇರುವ 'ಪೂಮಲೆ'ಬೆಟ್ಟದಲ್ಲಿ ಕಲ್ಯಾಣಸ್ವಾಮಿಗೆ ಆಶ್ರಮವೊಂದನ್ನು ಕಟ್ಟಿಸಿಕೊಟ್ಟ. ಈ ಕಪಟ ಕಲ್ಯಾಣಸ್ವಾಮಿ. ತೋರಿಕೆಗೆ ಅಪರಂಪಾರನನ್ನೇ ಹೋಲುತ್ತಿದ್ದುದರಿಂದ ಸುಳ್ಯದ ಗೌಡರು. ಮತ್ತಿತರ ಪ್ರಜೆಗಳು ಅವನು ಅಪ್ಪಾಜಿ ಅರಸನ ಎರಡನೇ ಮಗನೆಂಬುದನ್ನು ಸುಲಭವಾಗಿ ಒಪ್ಪಿದರು. ಸುಳ್ಯದಿಂದ ಭಾಗಮಂಡಲ ಕಡೆ ವಲಸೆ ಹೋದ ಗೌಡ ಜನಾಂಗದವರೂ ಇದನ್ನು ನಂಬಿದರು. ಕೆದಂಬಾಡಿ ರಾಮಗೌಡನ ಆಪ್ತನಾದ ಗುಡ್ಡೆಮನೆ ಅಪ್ಪಯ್ಯ ಗೌಡ ಭಾಗಮಂಡಲ ಕಡೆಯ ಗೌಡರಲ್ಲಿ ಅತ್ಯಂತ ಪ್ರಮುಖನಾಗಿದ್ದ.

ಕಲ್ಯಾಣಸ್ವಾಮಿಗಾಗಿ ಸುಳ್ಯ - ಭಾಗಮಂಡಲದ ಗೌಡರು ಒಟ್ಟು ಸೇರಿದ್ದು ಕ್ಯಾ ||ಲೀ ಹಾರ್ಡಿಗೆ ತಿಳಿಯದೇ ಇರಲಿಲ್ಲ. ಲೀ ಹಾರ್ಡಿಯ ಆಪ್ತರಾಗಿದ್ದ ಚೆಪ್ಪುಡಿರ ಪೊನ್ನಪ್ಪ ಮತ್ತು ಅಪ್ಪಾರಂಡ ಬೋಪುವೂ ಇದನ್ನು ನಂಬಲಿಲ್ಲ. ಪೊನ್ನಪ್ಪ ಮತ್ತು ಬೋಪು ಇಬ್ಬರೂ ಸೇರಿ ದಂಗೆಯನ್ನು ಮುರಿಯಲು ಸಿದ್ಧರಾದರು. ಲೀ ಹಾರ್ಡಿಗೆ ಅಗತ್ಯವಾಗಿ ಬೇಕಾಗಿದ್ದ ಕೆಲಸ ಅದು. ಏಕೆಂದರೆ ಜಾತಿಯಿಂದ ಕೊಡವರಾಗಿದ್ದ ಪೊನ್ನಪ್ಪ ಮತ್ತು ಬೋಪು ಗೌಡರೊಂದಿಗೆ ಸೇರಿಕೊಂಡರೆ, ಇಡೀ ಕೊಡಗು ಮತ್ತು ಸುಳ್ಯ ಸೀಮೆಯ ಜನ ದಂಗೆ ಎದ್ದಂತಾಗುತ್ತಿತ್ತು. ಹಾಗಾಗಿ ಲೀ ಹಾರ್ಡಿಗೆ ಕೊನೇಪಕ್ಷ ಕೊಡವರನ್ನು ದಂಗೆಯಿಂದ ದೂರ ಉಳಿಸಬೇಕಾಗಿತ್ತು. ಹಾಗಾಗಿ ಆತ ಕೊಡವರಿಗೆ 'ಅದು ಗೌಡರ ದಂಗೆಯೆಂದೂ ಅದಕ್ಕೆ ಸೇರಬಾರದೆಂದೂ' ಹೇಳಿದ. ಲೀ ಹಾರ್ಡಿಯ ಕುತಂತ್ರ ಫಲಿಸಿತು. ಕೊನೇವರೆಗೂ ಕೊಡವರು (ಬೆರಳೆಣಿಕೆಯ ಕೆಲವರನ್ನು ಬಿಟ್ಟರೆ) ದಂಗೆಗೆ ವಿರೋಧವಾಗಿಯೇ ಕೆಲಸ ಮಾಡಿದರು. ಕೊಡವರು ಬ್ರಿಟಿಷರ ಸಹಾಯಕ್ಕೆ ನಿಂತಿದ್ದರಿಂದ ಗೌಡರು ಕೊಡವರ ವಿರುದ್ಧವೂ ಸಮರ ಸಾರುವುದು ಅನಿವಾರ್ಯವಾಗಿತ್ತು. ಈ ಬೆಳವಣಿಗೆ ಕೊಡಗಿನಲ್ಲಿ ಮಾತ್ರ ಕಂಡು ಬಂದದ್ದು. ಸುಳ್ಯ ಸೀಮೆಯಲ್ಲಿ ಇಂಥ ಜಾತಿ ವ್ಯತ್ಯಾಸಕಂಡು ಬಂದಿರಲಿಲ್ಲ. ಪೆರಾಜೆಯ ಬೀರಣ್ಣ ಬಂಟ, ಕುಂಬ್ಳೆಯ ಸುಬ್ರಾಯ ಹೆಗಡೆ, ಕರಣಿಕ ಸುಬ್ಬಯ್ಯರೇ ಮೊದಲಾದವರು ಗೌಡರಲ್ಲದಿದ್ದರೂ ಹೋರಾಟದ ಮುಂಚೂಣಿಯಲ್ಲಿದ್ದರು.

**ಹೋರಾಟಗಳು**

ಬ್ರಿಟಿಷರ ವಿರುದ್ಧ ನಡೆದ ಕೆಲಸಗಳೆಲ್ಲವನ್ನು 'ಅಟ್ಲೂರದೊರೆ' ರಾಮಪ್ಪಯ್ಯನು ಬ್ರಿಟಿಷರಿಗೆ ವರದಿ ಮಾಡುತ್ತಿದ್ದ. ಹಾಗಾಗಿ ಸುಳ್ಯದ ಗೌಡರು ಮೊದಲು ರಾಮಪ್ಪಯ್ಯನನ್ನು ಮುಗಿಸಿ ಬಿಡಲು ಹಂಚಿಕೆ ಮಾಡಿದರು. ಕೆದಂಬಾಡಿ ರಾಮ ಗೌಡನ ಮನೆಯಲ್ಲಿ ಗುಟ್ಟಾಗಿ ಸೇರಿದ್ದ ಹಲವು ವೀರರು 1837ರ ಏಪ್ರಿಲ್ 6ರಂದು ರಾಮಪ್ಪಯ್ಯನ ಕೊಲೆ ಮಾಡುವ ನಿರ್ಣಯವನ್ನು ಕೈಕೊಂಡರು. ಅದೇ ದಿನ ಭಾಗಮಂಡಲದಿಂದ ಅನೇಕ ವೀರರೂ ಗುಡ್ಡೆಮನೆ ಅಪ್ಪಯ್ಯನ ನೇತೃತ್ವದಲ್ಲಿ ತೊಡಿಕಾನ ಮಾರ್ಗವಾಗಿ ಸುಳ್ಯಕ್ಕೆ ಬಂದು ದಂಗೆಯೊಡನೆ ಸೇರುವುದೆಂದೂ ನಿರ್ಣಯಿಸಲಾಯಿತು. ಕೊಲ್ಲಮೊಗರು ಸಮೀಪದ ಕೊಪ್ಪಡ್ಕ ಗೌಡರ ಮನೆ, ಕೂಜುಗೋಡು ಕಟ್ಟೆಮನೆ, ಕೆದಂಬಾಡಿ ರಾಮ ಗೌಡನ ಮನೆ, ದಂಗೆಯವರು ಗುಟ್ಟಾಗಿ ಒಟ್ಟು ಸೇರಬೇಕಾಗಿದ್ದ ಜಾಗವಾಗಿತ್ತು.

ಕೆದಂಬಾಡಿ ರಾಮಗೌಡನ ನಿರೀಕ್ಷೆಯಂತೆ ಎಲ್ಲವೂ ನಡೆದಿದ್ದರೆ ಹೋರಾಟದ ರೀತಿ ಬೇರೆ ಆಗುತ್ತಿತ್ತು. ದುಡುಕು ಸ್ವಭಾವದ ಕುರುಂಜಿ ಸುಬ್ಬಯ್ಯನಿಗೆ ಏಪ್ರಿಲ್ 6ರ ವರೆಗೆ ಕಾಯುವಷ್ಟು ತಾಳ್ಮೆ ಇರಲಿಲ್ಲ. ಅಥವಾ ಇನ್ನಾವುದೇ ಕಾರಣಕ್ಕೆ 1837ರ ಮಾರ್ಚ್ 28ಕ್ಕೆ ಅಟ್ಲೂರು ರಾಮಪ್ಪಯ್ಯನ ಕೊಲೆಯಾಯಿತು. ನಿಗದಿ ಪಡಿಸಿದ ದಿನಕ್ಕಿಂತ ಮೊದಲೇ ಇದು ನಡೆದುದರಿಂದ ಸ್ವಲ್ಪ ಗೊಂದಲ ಉಂಟಾದದ್ದು ಸಹಜವೇ ಆಗಿದೆ. ಆದರೂ ಮುಂದಾಲೋಚನೆ ಇಲ್ಲದ ಈ ದಂಗೆಯವರು ಅದೆ ದಿನ ಸುಳ್ಯದ ಖಜಾನೆಯನ್ನು ವಶಪಡಿಸಿಕೊಂಡರು. ಆದರೆ ಭಾಗಮಂಡಲದಿಂದ ಬರಬೇಕಾಗಿದ್ದ ಜನರು ಮಾತ್ರ ಬರಲಿಲ್ಲ.

---

ನಮ್ಮ ಅಂತರಂಗದ ಪುಸ್ತಕ ತೆರೆಯುವವರೆಗೆ ಉಳಿದೆಲ್ಲ ಪುಸ್ತಕಗಳೂ ಉಪಯೋಗಕ್ಕೆ ಬಾರವು. —ವಿವೇಕಾನಂದ.

ಅದಕ್ಕೂ ನಿಗಧಿಪಡಿಸಿದ ದಿನಕ್ಕಿಂತ ಮೊದಲೇ ದಂಗೆ ಆರಂಭವಾದದ್ದು ಕಾರಣವಾಗಿರಬೇಕು. ಆದರೂ ರಾಮಪ್ಪಯ್ಯನ ಕೊಲೆ ಸುದ್ದಿ ಕೇಳಿ ತಾವುನಾಡು, ಬೆಂಗುನಾಡು, ಕೆದಂಬಾಡಿ, ಭಾಗಮಂಡಲದ ಗೌಡ ವೀರರು ಕರಿಕೆ ತೊಡಿಕಾನದ ಮಾರ್ಗವಾಗಿ ಸುಳ್ಯದ ಕಡೆ ಹೊರಟರು. 'ಗೌಡರು ದಂಗೆ'ಯನ್ನು ಮುರಿಯಲು ಸಿದ್ದರಾಗಿದ್ದ ಕೊಡವರು ಇದನ್ನು ಲೀಹಾರ್ಡಿಗೆ ತಿಳಿಸಿದರು. ಲೀಹಾರ್ಡಿಯು ಕೊಡವರನ್ನೇ ಇದಕ್ಕೆ ನೇಮಿಸಿದ. ಸುಭೇದಾರ ಮಾದಯ್ಯನು 1837 ಮಾರ್ಚ್ 31ರಂದು ಸ್ವಾತಂತ್ರ್ಯ ವೀರರನ್ನು ತೊಡಿಕಾನ ಮಾರ್ಗದಲ್ಲಿ ಅಡ್ಡತಡೆದು, ಅವರು ಸುಳ್ಯದತ್ತ ಬರದಂತೆ ನೋಡಿಕೊಳ್ಳುವು ದರಲ್ಲಿ ಯಶಸ್ವಿಯಾದ. ಇದು ದಂಗೆಗೆ ಬಿದ್ದ ಅತ್ಯಂತ ದೊಡ್ಡ ಹೊಡೆತ. ಲೀಹಾರ್ಡಿಯ ಆದೇಶದಂತೆ ಮಡಿಕೇರಿಯಲ್ಲಿದ್ದ 30ನೇ ರೆಜಿಮೆಂಟಿನ ಎರಡು ತುಕುಡಿ ಸೈನ್ಯದ ನೇತಾರನಾಗಿ ಬಂದ ಬೋಪುವು ಏಪ್ರಿಲ್ ಒಂದರಂದು 150 ಜನ ಗೌಡ ವೀರರನ್ನು ಹೀನಾಯವಾಗಿ ಸೋಲಿಸಿ 6ಜನ ಗೌಡರನ್ನು ಸೆರೆ ಹಿಡಿದುಕೊಂಡು ಹೋದ. ಸು. 510 ಸೈನಿಕರೆದುರು 160ಗೌಡರು ಹೋರಾಡಿ ಗೆಲ್ಲುವುದನ್ನು ಯಾರೂ ನಿರೀಕ್ಷಿಸಬಾರದು.

ಸುಳ್ಯ ಸೀಮೆಯಲ್ಲಿ ಜನ ಕೊಡಗಿನಿಂದ ವೀರರು ಬರುವುದನ್ನು ನಿರೀಕ್ಷಿಸಿದರೂ ಹಾಗಾಗಲಿಲ್ಲ. ಆದರೂ ರಾಮಗೌಡ ಧೃತಿಗೆಡಲಿಲ್ಲ. ಸುಳ್ಯದ ಖಜಾನೆಯನ್ನು ಲೂಟಿಮಾಡಿ ಬೇಂಗಮಲೆ ಮಾರ್ಗವಾಗಿ ಅವರು ಬೆಳ್ಳಾರೆ ಕಡೆ ನಡೆದರು. ಅದೇ ದಿನ ದಂಗೆಯವರು ಕಪಟ ಕಲ್ಯಾಣಸ್ವಾಮಿ ಯನ್ನು ತಮ್ಮ ರಾಜನೆಂದು ಘೋಷಿಸಿದರು ಈ ಹೊತ್ತಿಗೆ ದಂಗೆಯಲ್ಲಿ ಕೊನೇಪಕ್ಷ 2000ಜನರ ವೀರರಿದ್ದರೆಂದು ಕಾಟನ್ ಹೇಳುತ್ತಾನೆ. (ಕಾಟನ್: 1837) ಬೆಳ್ಳಾರೆಗೆ ಬಂದ ಎರಡು ದಿನದ ಅನಂತರ ಕಲ್ಯಾಣ ಸ್ವಾಮಿ ಕೂಜುಗೋಡು ಅಪ್ಪಯ್ಯ ಗೌಡರಿಗೆ ಬರೆದ ಪತ್ರವೊಂದು ಲಭ್ಯವಾಗಿದೆ-" I have arrived at the Bellary cutcheri and you are directed to proceed to Kotagoond immediatly taking the men with you of the villages under your charge and place 50 men at that place. To prevent the conveyance of the Company's Tappal! as well as to use arms against any persons who may pass through that road and communicate on thq subject. If you allow any papers to be carried away your will suffer punishment for the same, you will obsrve this and continue to conduct the duties faithfully" (ಕಾಟನ್. 1837)

ಈ ಪತ್ರದ ಮೂಲಕ ಬ್ರಿಟಿಷರು ಸುಳ್ಯ ಸೀಮೆಗೆ ಕಾಲಿಡದಂತೆ ಕಲ್ಯಾಣ ಸ್ವಾಮಿಯು ಜಾಗ್ರತೆ ವಹಿಸಿದ. ಕೊಡಗಿನಿಂದ ಬರಬೇಕಾದ ಶೂರರು ಬರದೇ ಇದ್ದುದರಿಂದ ಗುಡ್ಡೆಮನೆ ಅಪ್ಪಯ್ಯ ಗೌಡರಿಗೂ ಪತ್ರ ಕಳುಹಿಸಲಾಯಿತು.

" I am living at Bellary renowned for affording you protection and continuing the reputation of this sanction as before. you will there fore proceed to my presence to have the visit of my feet and gain all your wishes ; should any of you delay in so doing, the Shivamahadeva will make such arrangments as may be deemed expedient for that purpose, you will consider this and be grateful. " (ಕಾಟನ್ : 1837) ಆದರೆ ಈ ಪತ್ರಕ್ಕೆ ಕೊಡಗಿನಿಂದ ಏನಾದರೂ ಪ್ರತಿಕ್ರಿಯೆ ಬಂದಂತಿಲ್ಲ. ಏಕೆಂದರೆ ಅಲ್ಲಿನ ವೀರರೆಲ್ಲ ಈಗಾಗಲೇ ಸೆರೆಯಲ್ಲಿದ್ದರು.

ಬೆಳ್ಳಾರೆಯಲ್ಲಿ ಕಲ್ಯಾಣ ಸ್ವಾಮಿ ನಾಮ ಮಾತ್ರ ರಾಜನಾಗಿದ್ದನು. ಅವನಿಗೆ ಓದಲೂ ಬರೆಯಲೂ ಬರುತ್ತಿರಲಿಲ್ಲ ವಾದ್ದರಿಂದ ಬರವಣಿಗೆ ಕೆಲಸವನ್ನು ಕರಣಿಕ ಸುಬ್ಬರಾಯನು ಮಾಡುತ್ತಿದ್ದ. ಕೆಲಸಗಳೆಲ್ಲದರ ನಿರ್ವಾಹಕ ಕೆದಂಬಾಡಿ ರಾಮಗೌಡನೇ ಆಗಿದ್ದ. ಏಪ್ರಿಲ್ 3ರಂದು ಪುತ್ತೂರನ್ನು ವಶಪಡಿಸಿಕೊಂಡ ದಂಗೆಯವರು ಏಪ್ರಿಲ್ 4ರಂದು ಪಾಣೆಮಂಗಳೂರನ್ನು ಗೆದ್ದರು. ಕುಂಬಳೆಯ ಸುಬ್ರಾಯ ಹೆಗ್ಗಡೆ ಪಾಣೆಮಂಗಳೂರಲ್ಲಿ ದಂಗೆಯವರನ್ನು ಸೇರಿಕೊಂಡ. ಬಂಟವಾಳದ ಮತ್ತು ಪಾಣೆಮಂಗಳೂರಿನಲ್ಲಿದ್ದ ಕೊಂಕಣಿಗಳು ಮಾತ್ರ ದಂಗೆಯವರಿಗೆ ವಿರುದ್ಧವಾಗಿಯೇ ಇದ್ದರು. ಅವರನ್ನು ಸೇರಿಸಿದ ದಂಗೆಯವರು ಏಪ್ರಿಲ್ 5ರಂದು ಮಂಗಳೂರಿನ ನಾಗರಿಕರಿಗೆ ಪತ್ರ ಬರೆದರು. -"The troops of the swamy having arrived to fight a battle against English ; you are directed to join us, taking of arms and other weapons which you may posses and if you act otherwise, the whole of your family will be beheaded,. There is a force consisting of 12 lakhs of troops expected and consequently you will send messages instantly as to your joining to force of the Swamy, as if otherwise you will suffer the consequences. If you will all join you will be protected. You must write with all haste on the receipt of this niroop. ( ಕಾಟನ್ :1837) ಪತ್ರದಲ್ಲಿ ಬರೆದಂತೆ 12 ಲಕ್ಷ ಜನ ಇದ್ದಿರಲು ಸಾಧ್ಯವಿಲ್ಲ. ಹೆಚ್ಚೆಂದರೆ 12 ಸಾವಿರ ವೀರರು ಇದ್ದಿರಬಹುದು.

ಏಪ್ರಿಲ್ 6ರಂದು ( ವಾಸ್ತವವಾಗಿ ಆ ದಿನ ದಂಗೆ ಆರಂಭ ವಾಗಬೇಕಿತ್ತು) ಸ್ವಾತಂತ್ರ್ಯ ವೀರರು ಮಂಗಳೂರಿನಲ್ಲಿದ್ದ ಬ್ರಿಟಿಷರ 2ನೇ ರೆಜಿಮೆಂಟನ್ನು ಸೋಲಿಸಿ ಮಂಗಳೂರನ್ನು ವಶಪಡಿಸಿಕೊಂಡರು. ಇದು ಅಮರ ಸುಳ್ಯದ ದಂಗೆಯ

---

ಪುಸ್ತಕದ ಅವಹೇಳನವೇ ಜ್ಞಾನದ ಕೊಲೆ. —ಜೆ. ಜೆ. ರೂಸೋ.

ಅತ್ಯುನ್ನತ ಸಾಧನೆಯಾಗಿತ್ತು. 13 ದಿನದ ಅನಂತರ ಕಣ್ಣಾನೂರಿನಿಂದ ಬಂದ ಆಂಗ್ಲರ "ಸುಸಜ್ಜಿತ ಸೈನ್ಯಕ್ಕೆ ಈ ವೀರರು ಶರಣಾದರು." ಪ್ರಮುಖರೆಲ್ಲ ಓಡಿಹೋದರು.

**ಕೊಡಗಿನಲ್ಲಿ ಹೋರಾಟ**

ಮುಖ್ಯವಾದ ವೀರರು ಬಂಧಿತರಾದರೂ ಕೊಡಗಿನಲ್ಲಿ ಹೋರಾಟ ಪೂರ್ತಿ ನಿಲ್ಲಲಿಲ್ಲ. ಮಂಗಳೂರು ಪತನವಾದ ಸುದ್ದಿಯಿಂದ ಅಲ್ಲಿನ ಹೋರಾಟಗಾರರಿಗೆ ಹೊಸ ಹುರುಪು ಬಂದಿರಬೇಕು. ಅಪ್ಪಯ್ಯ ಗೌಡನ ನೇತೃತ್ವದಲ್ಲಿ ಅವರು ಒಂದಾದರು. ಏಪ್ರಿಲ್ 8ರಂದು ಲೀ ಹಾರ್ಡಿ ಕೊಡಗರನ್ನು ಒಂದುಸೇರಿಸಿ ದಂಗೆಯ ವಿರುದ್ಧ ಹೋರಾಡುವವರಿಗೆ ಜಮ್ಮ ಕೊಡವೆನೆಂದೂ, ಕಂದಾಯ ವಜಾ ಮಾಡುವೆನೆಂದೂ ಮಾತು ಕೊಟ್ಟನು. ಫಲವಾಗಿ ಕೊಡಗರೆಲ್ಲ ಗೌಡರ ವಿರುದ್ಧ ಒಂದಾದರು.(ಜಾತಿಯ ಪ್ರಶ್ನೆಯೇ ದಂಗೆಯ ದುರ್ಬಲ ಅಂಶವಾಯಿತೆಂಬುದನ್ನು ಪರಿಭಾವಿಸಬೇಕು.) ಏಪ್ರಿಲ್ 11ರಂದು ಗೌಡರ ಬೇಟೆಯಾಡಲು ಹೊರಟ ದೀವಾನ ಬೋಪು ಏಪ್ರಿಲ್ 17ರಲ್ಲಿ ಕೊಡಗಿನ ಸ್ವಾತಂತ್ರ್ಯ ವೀರರನ್ನು ಮಣಿಸುವಲ್ಲಿ ಗೆದ್ದನು. ಅದೇ ದಿನ ಅಪ್ಪಯ್ಯ ಗೌಡನು ಅವನ ಸಹಾಯಕರೂ ಬಂಧಿತರಾದರು. ಉತ್ತಯ್ಯ ಮಲ್ಲಯ್ಯ. ಮೊದಲಾದ ಕೊಡವರೂ ಸೆರೆಸಿಕ್ಕರು. ಈ ಹೋರಾಟದ ಬಗ್ಗೆ ಹೆಚ್ಚು ವಿವರವನ್ನು ಇಲ್ಲಿ ಕೊಡುವುದು ಲೇಖನದ ಉದ್ದೇಶಕ್ಕೆ ಹೊರತಾದದ್ದು.

ಏಪ್ರಿಲ್ 19ರಂದು ಮಂಗಳೂರು ಕೋಟೆ ಬ್ರಿಟಿಷರ ಕೈವಶವಾದ ಅನಂತರ ಒಬ್ಬೊಬ್ಬರನ್ನಾಗಿ ಶೂರರನ್ನು ಸೆರೆ ಹಿಡಿಯಲಾಯಿತು. ಕಪಟ ಕಲ್ಯಾಣಸ್ವಾಮಿ ಮತ್ತು ಕೆದಂಬಾಡಿ ರಾಮಗೌಡನ ತಲೆಗೆ 10 ಸಾವಿರ ರೊಪಾಯಿಗಳನ್ನು ಘೋಷಿಸಲಾಯಿತು. ಅಂದರೆ ಇವರು ಎಷ್ಟು ಪ್ರಧಾನರಾಗಿದ್ದರೆಂಬುದು ತಿಳಿಯುತ್ತದೆ. ಕುಕನೂರು ಚೆನ್ನಯ್ಯ ಕರನಿಕ ಸುಬ್ಬಯ್ಯರ ತಲೆಗೆ 5 ಸಾವಿರ ರೂ. ಘೋಷಿಸಲಾಯಿತು.

**ದಂಗೆಯ ಮುಕ್ತಾಯ**

ಕರ್ನಲ್ ವಿಲಿಯಂ ಸನ್; ಕರಿಬಸವಯ್ಯ ಮೊದಲಾದವರ ಪ್ರಯತ್ನದಿಂದ ವೀರರುಗಳನ್ನೆಲ್ಲ ಸೆರೆಹಿಡಿಯಲಾಯಿತು. 1837ನೇ ಇಸವಿ ಮೇ ಎರಡನೇ ವಾರದಲ್ಲಿ ಕಲ್ಯಾಣ ಸ್ವಾಮಿ ಮತ್ತು ಕೆದಂಬಾಡಿ ರಾಮಗೌಡರು ಸೆರೆ ಸಿಕ್ಕಿದರು. ಮೇ 15ರಂದು ಅವರಿಂದ ಹೇಳಿಕೆಗಳನ್ನು ಪಡೆಯಲಾಯಿತು. ಇವರೆಲ್ಲರನ್ನು ಮಂಗಳೂರಿನ ಬಿಕರ್ನ ಕಟ್ಟೆಯಲ್ಲಿ ಗಲ್ಲಿಗೇರಿಸಲಾಯಿತು. ಕೊಡಗಿನ ಬಂಡಾಯದ ಪ್ರಮುಖನಾಗಿದ್ದ ಅಪ್ಪಯ್ಯಗೌಡನನ್ನು 1837ರ ಅಕ್ಟೋಬರ 31ರಂದು ಮಡಿಕೇರಿಯಲ್ಲಿ ಗಲ್ಲಿಗೇರಿಸಲಾಯಿತು. ಅಲ್ಲಿಗೆ ಸ್ವಾತಂತ್ರ್ಯ ಹೋರಾಟದ ಒಂದು ಅಧ್ಯಾಯ ಮುಗಿದಂತಾಯಿತು.

ದಂಗೆಗೆ ವಿರುದ್ಧವಾಗಿ ಬ್ರಿಟಿಷರಿಗೆ ಸಹಾಯ ಮಾಡಿದ ದಿವಾನ್ ಬೋಪು, ಪೊನ್ನಪ್ಪ ಮೊದಲಾದ ಕೊಡವರಿಗೆ ಜೋಡು ನಳಿಗೆಯ ಕೋವಿಯನ್ನು, ಪದಕಗಳನ್ನು, ಜಮ್ಮಗಳನ್ನೂ ನೀಡಿ ಗೌರವಿಸಲಾಯಿತು. ಸ್ವಾತಂತ್ರ್ಯ ವೀರರು ಒಂದೆಡೆ ನೆಲಕ್ಕಾಗಿ ಪ್ರಾಣಾರ್ಪಣೆ ಮಾಡಿದಾಗ ಇನ್ನೊಂದೆಡೆ ದೇಶೀಯರೇ ಇದರಿಂದ ಲಾಭ ಪಡೆದು ಸಂತೋಷಪಟ್ಟದ್ದು ನಮ್ಮ ಇತಿಹಾಸದ ಪುಟಗಳಲ್ಲಿ ಹೊಸ ವಿಷಯವೇನಲ್ಲ.

ಸುಳ್ಯದ ವೀರರು ಗೆರಿಲ್ಲಾ ಮಾದರಿಯಲ್ಲಿ ಹೋರಾಟ ನಡೆಸಿದ್ದರ ಬಗ್ಗೆ ಇನ್ನೂ ಸಂಶೋಧನೆ ಆಗಬೇಕಾಗಿದೆ. ಕುದುರೆ ಮೇಲೆ ಬರುವ ಬ್ರಿಟಿಷರನ್ನು ಬಿದಿರು ಗುತ್ತಿಗಳಲ್ಲಿ ಸಿಕ್ಕಿಸಿ ಹಾಕಿದ್ದು; ಬಿಸಿ ಅಂಬಲಿಯನ್ನು ಎರೆದು ಬ್ರಿಟಿಷರನ್ನು ಓಡಿಸಿದ್ದು, ಇನ್ನೂ ಕಥೆಯಾಗಿ ಉಳಿದಿದೆ. ಮೈಸೂರಿನ ಅರಮನೆಯಿಂದ ಈ ದಂಗೆಗೆ ಬೇಕಾದ ಸಲಹೆ ಸೂಚನೆಗಳು ಬರುತ್ತಿದ್ದವು ಎನ್ನಲಾಗುತ್ತಿದೆ. ಇದರ ಬಗ್ಗೆಯೂ ಸಂಶೋಧನೆ ಅಗತ್ಯ ಸುಳ್ಯ ಪರಿಸರದ ಗೌಡರುಗಳು ದಂಗೆಯ ನೆನಪಿಗೆ ಇಟ್ಟುಕೊಂಡ ಕತ್ತಿಗಳನ್ನು ಸಂಗ್ರಹಿಸಿ ರಕ್ಷಿಸಬೇಕಾಗಿದೆ.

**ಉಪಸಂಹಾರ**

ಇತಿಹಾಸದ ಬಗ್ಗೆ ಪೂರ್ಣಮಟ್ಟದ ಅರಿವು ಇರಬೇಕಾದ್ದು ಅಗತ್ಯ. ಈ ನಿಟ್ಟಿನಲ್ಲಿ ಅಮರ ಸುಳ್ಯದ ದಂಗೆಯನ್ನು ಸರಿಯಾಗಿ ಅರ್ಥವಿಸಿಕೊಳ್ಳಬೇಕಾಗಿದೆ. ಕರಾವಳಿಯಲ್ಲಿ ಕೊಂಕಣಿಗಳು ಮತ್ತು ಕೊಡಗಿನಲ್ಲಿ ಕೊಡವರು ದಂಗೆಗೆ ತಿರುಗಿ ನಿಂತದ್ದೇ ಹೋರಟದ ವಿಫಲತೆಗೆ ಮುಖ್ಯ ಕಾರಣ. ಜೊತೆಗೆ ಬರೇ ವೀರತನವೂ ಸಾಲದು. ಸಾಕಷ್ಟು ಮುಂದಾಲೋಚನೆ ಮಾಡಬಲ್ಲ ಮುಖಂಡರು ದಂಗೆಯಲ್ಲಿ ಇರಲಿಲ್ಲ. ಅವರೆಲ್ಲರಿಗೆ ಈ ಮಣ್ಣಿನ ಮೇಲೆ ಪ್ರೀತಿ ಇತ್ತು ಅಷ್ಟೇ. ಇದಕ್ಕಾಗಿ ಅಮರ ಸುಳ್ಯದ ವೀರರು ಬ್ರಿಟಿಷರ ವಿರುದ್ಧ ನಿಂತು ಅನೇಕ ಸವಲತ್ತುಗಳನ್ನು ಕಳೆದುಕೊಂಡು ಬಡವರಾದರು. ಕೊಂಕಣಿಗರು, ಕೊಡವರು ಬ್ರಿಟಿಷರಿಗೆ ಸಹಾಯಮಾಡಿ ಅನೇಕ ಸವಲತ್ತುಗಳನ್ನು ಪಡೆದುಕೊಂಡರು. ಇಂದಿಗೂ ಈ ಜನಾಂಗದವರು ಇದಕ್ಕೆ ಸಾಕ್ಷಿಯಾಗಿ ಉಳಿದಿದ್ದಾರೆ.

ಹೀಗೆ ಅಮರ ಸುಳ್ಯದ ವೀರರು ಹೋರಾಡಿ ಇತಿಹಾಸದಲ್ಲಿ ತಮ್ಮ ಹೆಸರನ್ನು ದಾಖಲು ಮಾಡಿದ್ದಾರೆ. ಇವರ ಶಾಶ್ವತ ನೆನಪಿಗೆ ಸುಳ್ಯ ಪರಿಸರದಲ್ಲಿ ಏನಾದರೊಂದು ಸ್ಮಾರಕವನ್ನು ರಚಿಸುವುದು ಸೂಕ್ತ.

**ದಂಗೆಯ ಪ್ರಮುಖ ಗೌಡರುಗಳು - ಪರಿಚಯ**

1. ***ಕೆದಂಬಾಡಿ ರಾಮ ಗೌಡ :*** ಸುಳ್ಯ ತಾಲೂಕಿನ ಉಬರಡ್ಕ ಮಿತ್ತೂರು ಗ್ರಾಮದ ಕೆದಂಬಾಡಿಯಲ್ಲಿ ಇವನ ಮನೆ. ಭೂಮಾಲಕ ನ್ಯಾಯ ಪಕ್ಷಪಾತಿಯಾದ್ದರಿಂದ ಜನಾನುರಾಗಿಯಾಗಿದ್ದ, ಇವನ ಮನೆತನದವರು ಈಗಲೂ ಕೊಡಗಿನ ಭಾಗಮಂಡಲದಲ್ಲಿದ್ದಾರೆ. ದಂಗೆಯ ಮುಂಚೂಣಿಯಲ್ಲಿದ್ದ ಮಹಾಶೂರ. ಕೊನೆಗೆ ಗಲ್ಲಿಗೇರಿದ.
2. ***ಕೂಜುಗೋಡು ಅಪ್ಪಯ್ಯ ಗೌಡ :*** ಇವನು ಕಟ್ಟೆಮನೆಯವನಾದ್ದರಿಂದ ಎಲ್ಲ ಗೌಡರುಗಳ ಮೇಲೆ ಅಧಿಕಾರ ಹೊಂದಿದ್ದ. ಇವನ ಚಿಕ್ಕಪ್ಪನಾದ ಕುಂಬಗೌಡ ಹಾಲೇರಿ ಮನೆತನದ ಆಪ್ತನಾಗಿದ್ದ. ಹಾಲೇರಿ ಮನೆತನವನ್ನು ತನ್ನ ವಶಕ್ಕೆ ತೆಗೆದುಕೊಂಡ ಬ್ರಿಟಿಷರ ಮೇಲೆ ಈತನಿಗೆ ದ್ವೇಷಬರಲು ಇದೇ ಕಾರಣ. ದಂಗೆಯ ಮೊದಲ ಹಂತದಲ್ಲಿ

ಅಪರಂಪರ ಇವನ ಮನೆಯಲ್ಲಿಯೇ ಉಳಿದುಕೊಂಡಿದ್ದ. ಮುಂದೆ ಬೆಳ್ಳಾರೆ ಕೋಟೆ ದಂಗೆಯವರ ವಶವಾದಾಗ ಈತ 200 ಜನರನ್ನು ಸೈನ್ಯಕ್ಕೆ ಒದಗಿಸಿದ.

3. ***ಕೂಜುಗೋಡು ಮಲ್ಲಪ್ಪ ಗೌಡ :*** ಇವನು ಬಹುಶಃ ಅಪ್ಪಯ್ಯ ಗೌಡನ ಸಹೋದರ, ಗುಡ್ಡೆಮನೆ ಅಪ್ಪಯ್ಯ ಗೌಡನೊಂದಿಗೆ ಕೊಡಗಿನಲ್ಲಿ ಸೆರೆಯಾಗಿ ಗಲ್ಲಿಗೇರಿದ ಶೂರ.

4. ***ಗುಡ್ಡೆಮನೆ ಅಪ್ಪಯ್ಯ ಗೌಡ :*** ಸುಳ್ಯದಲ್ಲಿ ರಾಮುಗೌಡ ಹೇಗೋ ಹಾಗೆ ಕೊಡಗಿನಲ್ಲಿ ಅಪ್ಪಯ್ಯ ಗೌಡ. 1934ರಲ್ಲಿ ಸುಳ್ಯದಲ್ಲಿ ಸುಬೇದಾರನಾಗಿದ್ದ. ದಂಗೆಗೆ ಮಲೆಕುಡಿಯ ವೀರರನ್ನು ಸೇರಿಸಿದ್ದು ಈತ. ಕೊನೆಗೆ ಗಲ್ಲಿಗೇರಿದ ವೀರ.

5. ***ಗುಡ್ಡೆಮನೆ ತಮ್ಮಯ್ಯಗೌಡ:*** ಇವನು ಗುಡ್ಡೆಮನೆ ಅಪ್ಪಯ್ಯ ಗೌಡನ ಸಹೋದರ. ಅಮರಸೀಮೆಗೆ ಪಾರುಪತ್ಯನಾಗಿದ್ದು ದರಿಂದ ಸುಳ್ಯ ಸೀಮೆಯ ಗೌಡರೊಂದಿಗೆ ಒಳ್ಳೆಯ ಸ್ನೇಹವಿತ್ತು.

6. ***ಕುರುಂಜಿ ಸುಬ್ರಾಯ ಗೌಡ :*** ಕುಂಬ್ಳೆ ಗ್ರಾಮದವನು. ಅಟ್ಲೂರು ರಾಮಪ್ಪಯ್ಯನ ಕೊಲೆಯಲ್ಲಿ ಇವನದ್ದು ಪ್ರಧಾನ ಪಾತ್ರ.

7. ***ಹುಲಿ ಕಡಿದ ನಂಜಯ್ಯ :*** ಹುಲಿಯನ್ನು ಹೋರಾಟದಲ್ಲಿ ಕೊಂದ ಶೂರ. ದಂಗೆಯಲ್ಲಿ ಪಾಲ್ಗೊಂಡು ಜೀವಾವಧಿ ಶಿಕ್ಷೆಗೆ ಒಳಗಾದ.

8. ***ಕುಕನೂರು ಚನ್ನಯ್ಯ :*** ಸೋಣಂಗೇರಿಯ ಸಮೀಪದ ಕುಕನೂರಿನವನು. ಕೆದಂಬಾಡಿ ರಾಮಗೌಡನ ನೆಂಟ, ಮಹಾಶೂರ. ಇವನ ತಲೆ ತೋರಿಸಿದವರಿಗೆ ಆ ಕಾಲದಲ್ಲಿ 5 ಸಾವಿರ ರೂಪಾಯಿಯನ್ನು ಕೊಡಲಾಗುವುದೆಂದು ಸಾರಲಾಗಿತ್ತು. ಜೀವಾವಧಿ ಶಿಕ್ಷೆಗೊಳಗಾದವೀರ.

ಇವರಲ್ಲದೆ ಕೋಲ್ಚಾರು ಕೂಸಣ್ಣಗೌಡ, ಸರಕಜೆ ಮಲ್ಲಯ್ಯ, ಚೆಂಬು ಅಣ್ಣಿ ಗೌಡ ಮೊದಲಾದವರು ಪಾಲ್ಗೊಂಡಿದ್ದಾರೆ. ಇವರ ಬಗ್ಗೆ ವಿವರಗಳು ಸಿಗುವುದಿಲ್ಲ.

*ಬ್ರಾಹ್ಮಣರಲ್ಲಿ ಕರಣಿಕ ಸುಬ್ಬಯ್ಯ ಮತ್ತು ಸುಬೇದಾರ ಕೃಷ್ಣ ಪ್ರಮುಖರು. ಈ ಲೇಖನವನ್ನು ಬರೆಯುವಲ್ಲಿ ಯೋಗ್ಯ ಸಲಹೆ ಸೂಚನೆಗಳನ್ನಿತ್ತ ಗುರುಗಳಾದ ಡಾ. ಬಿ. ಎ. ವಿವೇಕ ರೈಯವರಿಗೆ ನಾನು ಕೃತಜ್ಞತನಾಗಿದ್ದೇನೆ.*

ಅಧಾರ ಗ್ರಂಥಗಳು :

1. ಕೃಷ್ಣಯ್ಯ 1974 : ಕೊಡಗಿನ ಇತಿಹಾಸ ಪ್ರಸಾರಾಂಗ, ಮೈಸೂರು ವಿ. ವಿ. ನಿಲಯ.
2. ನಿರಂಜನ 1960 : ಸ್ವಾಮಿ ಅಪರಂಪಾರ ಮತ್ತು ಕಲ್ಯಾಣ ಸ್ವಾಮಿ.
3. ಶಗ್ರಿತ್ತಾಯ ಎ. ಆರ್. 1956 : ಕಲ್ಯಾಣಪ್ಪನ ಕಾಟಕಾಯಿ
4. ಶರ್ಮ ತಿ. ತಾ. 1957 : ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಬೆಂಗಳೂರು
5. ಸೂರ್ಯನಾಥ ಕಾಮತ್ 1973 : ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಐ. ಬಿ. ಪ್ರಕಾಶನ, ಬೆಂಗಳೂರು.
6. Cottons report on the insurrection in canara and Coorg : -
Mysore State, Archives 1837.

---

5 ನೇ ಪುಟದಿಂದ

ಆವಂತ್ಯ, ವಾಟಧಾನ, ಪುಷ್ಪಧ, ಶೈಖ ಎಂಬ ಹೆಸರುಗಳಿವೆ. ವ್ರಾತ್ಯರಾಜನ್ಯನಿಂದ ಜನಿಸಿದವರನ್ನು ಝುಲ್ಲ ಮಲ್ಲ, ನಿಚ್ಛವಿ, ನಟ, ಕರಣ, ಖಸ, ದ್ರವಿಡ ಎಂದು ಹೇಳುತ್ತಾರೆ. ಸೂತ, ವೈದೇಹ, ಚಂಡಾಲ, ಮಾಗದ, ಕ್ಷತ್ತೃ ಆಯೋಗದ ಎಂಬ ಆರು ಮಂದಿ ಪರಸ್ಪರ ಸಂಬಂಧದಿಂದ ತಂದೆಗೆ ಸಮಾನ ಸಂತತಿಯು ಉಂಟಾಗುವುದು. ನೀಚ ಸಂತತಿಯವರು ಪುನಃ ಪರಸ್ಪರ ಸಂಬಂಧದಿಂದ ಅತಿ ನೀಚ ಸಂತತಿಯು ಉಂಟಾಗುವುದು. ಕ್ಷತ್ರೀಯರು ಸಂಸ್ಕಾರ ಲೋಪದಿಂದಲೂ, ಬ್ರಾಹ್ಮಣರ ಸಹವಾಸವಿಲ್ಲದೆಯೂ ಶೂದ್ರರಾದರು. (ಪೌಂಡ್ರಕ, ಓಡ್ರ, ದ್ರವಿಡರು, ಕಾಂಬೋಜ, ಯವನ, ಶಕ, ಪಾರದ, ಅಪಹ್ಲವ, ಚೀನ, ಕಿರಾತ, ದರದ, ಖಶ ಇವರೆಲ್ಲ ಶೂದ್ರರಾದ ಕ್ಷತ್ರೀಯರು ಚಾತುರ್ವರ್ಣದಿಂದ ಬಾಹ್ಯರಾದ ಸಂಸ್ಕೃತ ಅಸಂಸ್ಕೃತ ಭಾಷೆಯನ್ನಾಡುವ ಜನರು ಕ್ರಿಯಾಹೀನರಾಗಿ ದಸ್ಯುಗಳಾಗಿದ್ದಾರೆ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರು ಅನುಕ್ರಮವಾಗಿ ಏಳು ಸಂತತಿಯನ್ನು ಪಡೆದರೆ ಉಚ್ಚ ನೀಚ ಜಾತಿ ಪರಿವರ್ತನೆಯಾಗುವುದು. (ಉತ್ತಮ ಕುಲ ಉಂಟಾಗುವುದು) ನೀಚ ಸ್ತ್ರೀಯಲ್ಲಿ ಉತ್ತಮ ಪುರುಷನ ಸಂತತಿ ಮತ್ತು ಉಚ್ಚ ಸ್ತ್ರೀ ನೀಚ ಪುರುಷ ಸಂತತಿ ಇವರಲ್ಲಿ ಬೀಜ ಪ್ರಾಧಾನ್ಯದಿಂದ ನೀಚ ಸ್ತ್ರೀಯ ಪ್ರಜೆಯೇ ಉತ್ತಮ ಮತ್ತು ಪೂಜ್ಯ. ಆದರೆ ಕೆಲವೊಮ್ಮೆ ತಪೋ ಬಲದಿಂದ ವಿಶ್ವಾಮಿತ್ರನಂತೆ [ಮಂತ್ರಿತ ಹವಿಸ್ಸು (ಪಾಯಸ) ಅದಲು ಬದಲಾಗಿ ವಿಶ್ವಾಮಿತ್ರ ಕ್ಷತ್ರಿಯ ಕುಲದಲ್ಲೂ ಪರಶುರಾಮ ಬ್ರಾಹ್ಮಣ ಕುಲದಲ್ಲೂ ಜನಿಸಿದರು] ಬೀಜ ಬಲದಿಂದ ಋಷ್ಯ ಶೃಂಗನಂತೆ(ಋಷ್ಯ ಶೃಂಗರು, ವಿಭಾಂಡಕ ಮುನಿಗೆ ಜಿಂಕೆಯಲ್ಲಿ ಜನಿಸಿದರು. ವಿಭಾಂಡಕ ಮತ್ತು ಋಷ್ಯ ಶೃಂಗರ ತಪೋ ಭೂಮಿಯೇ ಶೃಂಗೇರಿ) ಮತ್ತು ಕ್ಷೇತ್ರ (ಭೂಮಿ) ಪ್ರಾಧಾನ್ಯದಿಂದ ದೃತರಾಷ್ಟ್ರ (ಕರು) ಪಾಂಡು ರಾಜರಂತೆ ಜನಿಸುವರು. (ಸಂತಾನಕ್ಕಾಗಿ ಕಾಮರಹಿತ ಸಮಾಗಮ ಶಾಸ್ತ್ರ ರೀತಿ ದೋಷವಿಲ್ಲ)

— ಬಿಟ್ಟೀರ ಚೋಂದಮ್ಮ ಶಂಭು

ಆಧಾರ : ಮನು ಸ್ಮೃತಿ ಮತ್ತು ಪುರಾಣಗಳು.

---

ಜೀವನದ ಬಗೆಗೆ ಹೆಚ್ಚಿನ ಜ್ಞಾನ ನೀಡದ ಪುಸ್ತಕವು ವ್ಯರ್ಥ. —ಡಾ. ಜಾನ್ಸನ್.

## ಸಂಗಾತಿ ಭವಿಷ್ಯ : ಫೆಬ್ರವರಿ 16- 28ರ ತನಕ

ಜ್ಯೋತಿಷ್ಯರು : ಗಿರೀಶ್‌ಕುಮಾರ್, ಕೊಯನಾಡು

**ಮೇಷ ರಾಶಿ** : ದೈವಾನುಕೂಲವಿಲ್ಲ, ಮನಸ್ಸಿನಲ್ಲಿ ಬೇಸರ. ಮನಸ್ಸು ಸ್ಥಿಮಿತದಲ್ಲಿಲ್ಲ. ನೇತ್ರಬಾದೆ ಕಾಣಿಸುವುದು. ಹಣಕಾಸಿನ ವ್ಯವಹಾರದಲ್ಲಿ ಉತ್ತಮವಿಲ್ಲ. ಪಂಚೇಂದ್ರಿಯಗಳಿಗೆ ಕಡಿವಾಣ ಹಾಕಿ ವ್ಯವಹರಿಸಿ.

**ವೃಷಭ ರಾಶಿ** : ಗೃಹವಲಯದಲ್ಲಿ ಕಿರಿ ಕಿರಿ ಪುನಃ ಕಾಡಬಹುದು. ಹಣಕಾಸಿನ ವ್ಯವಹಾರದಲ್ಲಿ ಏರು ಪೇರು ಉಂಟಾಗಬಹುದು. ಶನಿಯನ್ನು ಆರಾಧನೆ ಮಾಡಿಕೊಂಡು ಬರುವುದರಿಂದ ಶುಭ.

**ಮಿಥುನ ರಾಶಿ** : ದೈವಾನುಕೂಲವಿದೆ. ಆದರೆ ಆರೋಗ್ಯ ಕಡೆ ಗಮನವಿರಿಸಿ. ಸಂಸಾರದಲ್ಲಿ ನಿಷ್ಠುರಗಳು ಬರಬಹುದು. ಹಣಕಾಸು ಸ್ಥಿತಿ ಸುಧಾರಿಸುವುದು. ಮನಸ್ಸಿಗೆ ನೆಮ್ಮದಿ ಇದೆ.

**ಕರ್ಕಾಟಕ ರಾಶಿ** : ದೈವಾನುಕೂಲವಿಲ್ಲ. ಆರೋಗ್ಯ ಹದಗೆಡುವುದು. ಅಪಘಾತ ಭಯವಿದೆ. ಹಣಕಾಸಿನ ಮಟ್ಟ ಸ್ವಲ್ಪ ಮಟ್ಟಿಗೆ ಸುಧಾರಿಸುವುದು. ದೇವತಾರಾಧನೆ ಮಾಡಿಕೊಂಡು ಬನ್ನಿ.

**ಸಿಂಹರಾಶಿ** : ದೈವಾನುಕೂಲವಿದೆ. ಗೃಹವಲಯದಲ್ಲಿ ನೆಮ್ಮದಿ. ವ್ಯಾಪಾರದಲ್ಲಿ ಲಾಭಾಂಶವಿದೆ. ಶತ್ರುಗಳ ತಂಟೆ ಹೆಚ್ಚಾಗುವುದು. ವಾಹನ ಖರೀದಿ ಯೋಗವಿದೆ.

**ಕನ್ಯಾರಾಶಿ** : ದೈವಾನುಕೂಲವಿದೆ. ಗೃಹವಲಯದಲ್ಲಿ ತುಸು ನೆಮ್ಮದಿ. ಹೊಸ ಭೂ ಸಂಬಂಧ ವ್ಯವಹಾರಗಳು ಪ್ರಸ್ತಾಪನೆಗೆ ಬರಲಿದೆ. ಮಾನಸಿಕ ಅಶಾಂತಿ ದೂರವಾಗಿ ಮನಸ್ಸಿಗೆ ನೆಮ್ಮದಿ. ಹಣಕಾಸಿನ ವ್ಯವಹಾರ ಉತ್ತಮವಿದೆ.

**ತುಲಾರಾಶಿ** : ದೈವಾನುಕೂಲವಿಲ್ಲ. ಗೃಹವಲಯದಲ್ಲಿ ಕಿರಿಕಿರಿ ತಪ್ಪಿದ್ದಲ್ಲ. ವಾಹನದಲ್ಲಿ ಸಂಚರಿಸುವಾಗ ಎಚ್ಚರ ಅಗತ್ಯ. ಶತ್ರುಗಳ ಭಯವಿದೆ. ಹಣಕಾಸಿನ ವ್ಯವಹಾರ ಸುಧಾರಿಸುವುದು.

**ವೃಶ್ಚಿಕ ರಾಶಿ** : ದೈವಾನುಕೂಲವಿಲ್ಲ, ಆರೋಗ್ಯವು ಮತ್ತೆ ಹದಗೆಡುವುದು. ಪಿತ್ತ ಚಾಪೂ ಬರುವುದು. ಮನಸ್ಸು ಸ್ಥಿಮಿತದಲ್ಲಿಲ್ಲ. ಮಾನಸಿಕ ಚಿಂತೆ ಕಾಡುವುದು. ದೇವತಾರಾಧನೆ ಮಾಡಿರಿ.

**ಧನಸ್ಸು ರಾಶಿ** : ದೈವಾನು ಕೂಲವಿದೆ. ಪ್ರಯಾಣದಿಂದ ತೊಂದರೆಯಿದೆ. ಆರೋಗ್ಯ ಸುಧಾರಿಸುವುದು. ಹೊಸ ಭೂಮಿ ಖರೀದಿ. ಮನೆಯಲ್ಲಿ ದೇವತಾರಾಧಾನೆ ನಡೆಯುವುದು. ಹಣಕಾಸು ಸ್ಥಿತಿ ಪರವಾಗಿಲ್ಲ.

**ಮಕರ ರಾಶಿ** : ದೈವಾನುಕೂಲವಿದೆ. ಗೃಹವಲಯದಲ್ಲಿ ತುಸು ನೆಮ್ಮದಿ. ಹಣಕಾಸು ವ್ಯವಹಾರದಲ್ಲಿ ಲಾಭಾಂಶವಿದೆ. ಶತ್ರುಗಳ ವಂಚನೆಗೆ ಒಳಗಾಗುವಿರಿ. ಎಚ್ಚರ ಅಗತ್ಯ.

**ಕುಂಭ ರಾಶಿ** : ದೈವಾನುಕೂಲವಿಲ್ಲ. ಅನಾವಶ್ಯಕ ಸಂಚಾರದಿಂದ ಮನಸ್ಸಿಗೆ ನೆಮ್ಮದಿ ಇಲ್ಲ. ಹಣಕಾಸಿನ ವ್ಯವಹಾರದಲ್ಲಿ ನಷ್ಟ ಅನುಭವಿಸುವಿರಿ. ಗೃಹವಲಯದಲ್ಲಿ ಸಂತೋಷದ ವಾತಾವರಣವಿರುವುದು.

**ಮೀನ ರಾಶಿ** : ದೈವಾನುಕೂಲವಿಲ್ಲ. ಗೃಹವಲಯದಲ್ಲಿ ತುಸು ನೆಮ್ಮದಿ. ಹಣಕಾಸು ವ್ಯವಹಾರದಲ್ಲಿ ಲಾಭಾಂಶವಿದೆ. ಚಂಚಲ ಮನಸ್ಸು. ಅನಾವಶ್ಯಕ ಸಂಚಾರದಿಂದ ಧೃತಿಗೆಡುವುದು ಬೇಡ. ಪಂಚೇಂದ್ರಿಯಗಳಿಗೆ ಕಡಿವಾಣ ಹಾಕಿ ವ್ಯವಹರಿಸಿ.

---

## ಹಿತ್ತಲ ಮದ್ದು

ಕಿಸ್ಕಾರ (ಕೇಪಳ) : ಇದರ ಸಸ್ಯಶಾಸ್ತ್ರೀಯ ಹೆಸರು ಇಕ್ಸೋರಾ ಕಾಕ್ಸಿನಿಯಾ (Ixora Coccinia) ಆಯುರ್ವೇದ ಚಿಕಿತ್ಸಾ ಪದ್ಧತಿಯಲ್ಲಿ ಈ ಗಿಡಕ್ಕೆ ಮಹತ್ವದ ಸ್ಥಾನವಿದೆ. ಕಿಸ್ಕಾರ ಹೂ ಮತ್ತು ಜೀರಿಗೆಯನ್ನು ತೆಂಗಿನ ಕಾಯಿಯ ಹಾಲಿನಲ್ಲಿ ಅರೆದು ಲೇಪಿಸುವುದರಿಂದ ರಕ್ತ ದೋಷದಿಂದ ಉರಿಬಾವು ವಾಸಿಯಾಗುತ್ತದೆ. ಸೀಯಾಳದ ನೀರಿನಲ್ಲಿ ಕುಸುಮ ತೆಗೆದ ಕಿಸ್ಕಾರ ಹೂವನ್ನು ಎರಡು ಹಿಡಿ ಹಾಕಿ ಚೆನ್ನಾಗಿ ಕಿವಿಚಿ, ಸೋಸಿ ರಸದಷ್ಟೆ ಹಸುವಿನ ನೊರೆ ಹಾಲನ್ನು ಸೇರಿಸಿ ಒಂದು ಚಮಚ ಸಕ್ಕರೆಯನ್ನೂ, ಒಂದು ಚಮಚ ದನದ ತುಪ್ಪವನ್ನು ಹಾಕಿ ಬೆಳಿಗ್ಗೆ ಸೇವಿಸುವುದು. ಇದು ನಿತ್ರಾಣದಿಂದ ಕಿವಿ ಕೇಳದಾದರೆ ಮಾಡಬಹುದಾದ ಔಷಧಿ. ಕಿಸ್ಕಾರದ ಬೇರಿನ ಸಿಪ್ಪೆಯನ್ನು ತೆಂಗಿನ ಹಾಲಿನಲ್ಲಿ ಅರೆದು, ಕಲಾಯಿ ಇಲ್ಲದ ತಾಮ್ರದ ಪಾತ್ರೆಯಲ್ಲಿ ಹಾಕಿ ಬಿಸಿಲಿನಲ್ಲಿರಿಸಿ ಅದರ ಮೇಲೆ ನೆಗೆದು ಬಂದ ಎಣ್ಣೆಯನ್ನು ಲೇಪಿಸುವುದರಿಂದ ಮಕ್ಕಳ ಕೆಂಪು ಕಜ್ಜಿಗಳು ಗುಣವಾಗುತ್ತದೆ. ಕಿಸ್ಕಾರದ ಬೇರನ್ನು ಕೊಂದೆ ಮರದ ಕೆತ್ತೆಯೊಂದಿಗೆ ತೆಂಗಿನಕಾಯಿಯ ಹಾಲಿನಲ್ಲಿ ಅರೆದು ಲೇಪಿಸಿದರೆ ಬೆರಳಿನೆಡೆ ಯಲ್ಲಿ ಬರುವ ಹುಣ್ಣು ಕೂಡಾ ವಾಸಿಯಾಗುವುದು. ಒಂದು ಲೋಟ ಹಾಲನ್ನು ಒಂದು ಹಿಡಿ ಕಿಸ್ಕಾರ ಹೂವಿನೊಂದಿಗೆ ಕುದಿಸಿ, ಸೋಸಿದಲ್ಲಿ ಮಕ್ಕಳನ್ನು ಆಗಾಗ ಕಾಡುವ ವಾಂತಿ-ಭೇದಿಗೆ ಅತ್ಯುತ್ತಮ ಔಷಧಿ ಲಭ್ಯ.

ಬರಹ : **ಹೊಸೂರು ತುಳಸಿಮಾಲ. ಚೇರಂಗಾಲ.**

---

**ಹೆಚ್ಚು ಓದಿದಷ್ಟು ನಮ್ಮ ಅಜ್ಞಾನ ತಿಳಿಯುತ್ತದೆ. — ಷೆಲ್ಲಿ.**

# ಯೌವ್ವನದ ದಿವ್ಯತೆ

ಯೌವ್ವನ ಒಂದು ವರವೂ ಹೌದು, ಶಾಪವೂ ಹೌದು, ಯೌವ್ವನವೆಂದರೆ ಶಕ್ತಿ, ಸೌಂದರ್ಯ, ಉತ್ಸುಕತೆ, ವಿಚಾರಧಾರೆ, ಛಲ, ಸಾಮರ್ಥ್ಯ ಹಾಗೆಯೇ ಯೌವ್ವನ ಎಂದರೆ ತಿಳಿಗೇಡಿತನ, ದೌರ್ಬಲ್ಯ, ಅಹಂಕಾರ, ಕ್ರೋಧ, ಮದ, ಮತ್ಸರ, ಇವೆರಡರಲ್ಲಿ ಯಾವುದನ್ನು ಆರಿಸಿಕೊಳ್ಳಬೇಕೆಂಬುದು ತರುಣರಿಗೆ ಬಿಟ್ಟಿದ್ದು.

ಯೌವ್ವನ ಹುಟ್ಟುವಾಗ ಇರುವುದಿಲ್ಲ, ಸತ್ತನಂತರವೂ ಇಲ್ಲವೇ ಇಲ್ಲ. ಹುಟ್ಟು ಸಾವಿನ ಮಧ್ಯದಲ್ಲಿ ಸ್ವಲ್ಪ ಸಮಯ ಕಾಣಿಸಿಕೊಂಡು ಕ್ಷೀಣಿಸುತ್ತಾ ಹೋಗುವುದು. ತರುಣ ತರುಣಿಯರೆಂದರೆ ತಾರುಣ್ಯ ಇರುವವರು. ಈ ತಾರುಣ್ಯ ಪ್ರಕೃತಿಯ ದಿವ್ಯ ಕೊಡುಗೆ. ಅದನ್ನು ಉಪಯೋಗಿಸುವ ಬುದ್ಧಿ, (ಜ್ಞಾನ) ನಮ್ಮಲ್ಲಿರಬೇಕು. ಇದೆ. ಅದು ಬರುವುದು ನಾವು ಪಡೆದ ಜ್ಞಾನದಿಂದ ಬುದ್ಧಿ ಅಥವಾ ಜ್ಞಾನವೆಂದರೇನು? ವಿದ್ಯೆ ಮನುಷ್ಯನಿಗೆ ಸೌಂದರ್ಯ ಗುಪ್ತಧನ, ನಮ್ಮ ಬೇಡಿಕೆಗಳನ್ನು ಈಡೇರಿಸುವ ಸಾಧನ, ಗುರುಗಳ ಗುರು, ಆಪ್ತಬಂಧು, ಆರಾಧ್ಯ ದೇವತೆ. ಆದ್ದರಿಂದ ವಿದ್ಯಾಹೀನತೆ ಪಶುಸಮಾನ ಎಂಬುವರು. ವಿದ್ಯೆ ವಿನಯವನ್ನು ಸಂಪಾದಿಸಬೇಕು. ನಾವು ಕೆಟ್ಟದ್ದರಿಂದ ಒಳ್ಳೆಯದಕ್ಕೆ ಮಾರ್ಪಾಟಾಗಬೇಕು. ವಿದ್ಯೆಯಲ್ಲಿ 2 ವಿಧ. 1. ಮೆದುಳಿಗೆ ಸಂಬಂಧಿಸಿದ ವಿದ್ಯೆ 2. ಹೃದಯಕ್ಕೆ ಸಂಬಂಧಿಸಿದ ವಿದ್ಯೆ ಹೃದಯ ಸಂಬಂಧಿಸಿದ ವಿದ್ಯೆ ತಾಯಿ ಕಲಿಸಿದ, ಕಲಿಸುವ ವಿದ್ಯೆ, ಉದಾಹರಣೆ, ಸಹನೆ, ಕೃತಜ್ಞತೆ, ಕೆಟ್ಟದ್ದರಿಂದ ದೂರವಿರುವುದು, ಸೌಜನ್ಯ, ಸಹಬಾಳ್ವೆ, ದಯ, ವಿನಯ, ಸತ್ಯ ಇವು ಹೃದಯದ ಸಂಪತ್ತು. ಮೆದುಳಿನ ವಿದ್ಯೆ ಭೋದಕರಿಂದ ಬಂದ ವಿದ್ಯೆ, ಬದುಕಿನ ವಿದ್ಯೆ, ನೌಕರಿ ವಿದ್ಯೆ, ವಿಷಯ ಸಂಗ್ರಹಣ ವಿದ್ಯೆ ಇದು ಹೊಟ್ಟೆ ತುಂಬಿಸುವ ವಿದ್ಯೆ. ಹೊಟ್ಟೆಯೆಂದರೆ ಒಂದು ನೆನಪಾಯಿತು. ನಾಲಿಗೆಯನ್ನು ನಂಬಿ, ಹೊಟ್ಟೆ ಕೆಟ್ಟಿತು. ಹೊಟ್ಟೆಯನ್ನು ನಂಬಿ ನಾನು ಕೆಟ್ಟೆನು, ಎಂದಾಗ ಬಾರದು.

ತಂದೆ ತಾಯಂದಿರು ತಮ್ಮ ಹೊಟ್ಟೆಕಟ್ಟಿ, ಅನುಕೂಲ ಗಳನ್ನು ಬದಿಗಿರಿಸಿ ನೋವನ್ನನುಭವಿಸಿ, ಮಕ್ಕಳಿಗೆ ವಿದ್ಯೆಕಲಿಸಲು ಮುಂದಾಗುತ್ತಾರೆ. ನಾವು ಅದನ್ನು ತಿಳಿದಿರುವುದಿಲ್ಲ. ಯೌವ್ವನದ ಮದದಲ್ಲಿ ವಿದ್ಯೆಯ ಬದಲು ಅವಿದ್ಯೆಯನ್ನು ಹುಡುಕಿಕೊಂಡು ಹೋಗುತ್ತೇವೆ. ಮಕ್ಕಳು ವಿದ್ಯೆ ಕಲಿಯಲಿಲ್ಲವೆಂದರೆ ಮೊಟ್ಟಮೊದಲು ವ್ಯಸನಪಡುವವರು ಹೆತ್ತತಾಯಿ. ಹೆತ್ತ ತಾಯಿಯನ್ನು ದುಃಖಿಕ್ಕೀಡುಮಾಡಿ ಮಕ್ಕಳು ನಡಿಸುವ ಜೀವನ ಪಾಪ ಮತ್ತು ಪಾತಕಿ ಜೀ ವನ. ಆದ್ದರಿಂದ ತರುಣ ತರುಣಿಯರು ವಿದ್ಯೆ ಎಂಬ ಶಾರದೆಯ ದಾಸರಾಗಬೇಕು. ಅವಳನ್ನು ಆದರಿಸಬೇಕು. ಎಲ್ಲಾ ಸಂತೋಷಗಳಿಗೆ ಕಾರಣ ವಿದ್ಯೆ. ಅದನ್ನು ಮೊಟ್ಟ ಮೊದಲುಗಳಿಸಬೇಕು.

ವಿದ್ಯೆಗಳಿಕೆ ಜೀವನ ಪರಿಯಂತ. ಕಲಿತ ವಿದ್ಯೆಯ ಚತುರತೆ ಯನ್ನು ಯೌವ್ವನದಲ್ಲಿ ಸರಿಯಾಗಿ ಉಪಯೋಗಿಸಬೇಕು. ಹತ್ತು ಜನರಿಗೆ ಬೇಕಾದವರಾಗಬೇಕು. ಸತ್ತನಂತರ ಹೆಸರಿರಬೇಕು. ಇದೇ ಯೌವ್ವನದ ಗುರಿ.

ಯೌವ್ವನ ಆಕರ್ಷಣೀಯ, ಸಾಹಸಮಯ. ಆದ್ದರಿಂದ ಸ್ವಲ್ಪವೇ ಸಮಯವಿರುವ ಯೌವ್ವನದಲ್ಲಿ ಆದಷ್ಟು ಜನೋಪಯುಕ್ತ ಕಾರ್ಯ, ಸಮಾಜಸೇವೆ, ದೀನದಲಿತರ ಸೇವೆಗೆ ಮುಂದಾಗಬೇಕು. ಇಂದು ವಿದ್ಯೆಕಲಿತ ತರುಣ ತರುಣಿಯರ ಕನಸ್ಸು ಅಂತರಾಷ್ಟ್ರೀಯತೆಗೆ ನುಗ್ಗಬೇಕು. ಹಣ ಸಂಪಾದನೆ ಮಾಡಬೇಕು. ಇದು ಒಳ್ಳೆಯದೇ, ಎಲ್ಲೇ ಇರಲಿ ಹ್ಯಾಗೇ ಇರಲಿ, ಹೇಗಾದರೂ ಸಂಪಾದನೆ ಮಾಡಲಿ ಎಂಬುದು ಒಳ್ಳೆಯದೇ ಹಣಗಳಿಸುವುದು ಮುಖ್ಯ ಅಲ್ಲ. ಗಳಿಸಿದ ಹಣವನ್ನು ಯಾವಗುಣಕ್ಕಾಗಿ ವಿನಿಯೋಗಿಸಿದ್ದೇವೆಂಬುದೇ ಶ್ರೇಷ್ಠ ಗುಣವಿಲ್ಲದವನ ಹಣ ಕ್ಷಣಿಕ.

ಯೌವ್ವನ ಎಂದರೆ ವೀರ್ಯ. ತರುಣ ತರುಣಿಯರು ವೀರವಂತರಾಗಬೇಕು ಅಂಜುಬರುಕರಾಗಬಾರದು. ತಮ್ಮ ವೀರ್ಯವನ್ನು ತಮ್ಮಲ್ಲಿ ಉಳಿಸಿ ಅದನ್ನು ವೃದ್ಧಿಗೊಳಿಸಿ ಸಮಾಜಸೇವೆಗಾಗಿ ಸತತ ವಿನಿಯೋಗಿಸಬೇಕು. ಉಸಿರಾಟದಲ್ಲಿ ಸ್ವಚ್ಛತೆಗಾಗಿ ಭಗವಂತನು ಮೂಗಿನ ನಾಳದಲ್ಲಿ ಪ್ರಕೃತಿದತ್ತ ಸೋಸುವ ನಾಳವನ್ನಿಟ್ಟಿದ್ದಾರೆ. ಅದನ್ನು ಧೂಮಪಾನದಿಂದ ಮಲಿನಗೊಳಿಸಬಾರದು. ಹಾಗೆಯೇ ಶ್ವಾಸಕೋಶ, ಶ್ವಾಸನಾಳವನ್ನು ಮಾಧಕ ಪದಾರ್ಥದಿಂದ ಸುಟ್ಟುಕೊಳ್ಳಬಾರದು. ಮನಸ್ಸಿನಲ್ಲಿ ಒಳ್ಳೆಯ ಯೋಚನೆ. ನಾಲಿಗೆಯಲ್ಲಿ ಒಳ್ಳೆಯ ಸರಸ್ವತಿ, ಇಂದ್ರಿಯ ಗಳಲ್ಲಿ ಜನಾಂಗ ಉನ್ನತಿ ಕೆಲಸವಿರಬೇಕು. ಸಮಾಜಸೇವೆ ಎಂದರೆ ನಮಗೆ ನಾವೇ ಮಾಡಿಕೊಳ್ಳುವ ಸೇವೆ. ಇದು ಜನಾಂಗೀಯ ಸೇವೆ.

ನಾವು ನಮಗೆ ಬೇಕಾಗಿಯೋ ಬೇಡವಾಗಿಯೋ ಒಂದು ಜನಾಂಗದ ಸಂಸ್ಕೃತಿಯಲ್ಲಿ ಜನಿಸಿರುತ್ತೇವೆ. ಅಂದಮೇಲೆ ಆ ಜನಾಂಗದ ಭಾಷೆ, ಸಂಸ್ಕೃತಿ ಪರಂಪರೆಗೆ ಬದ್ಧವಾಗಿರಬೇಕು. ಹಾಗಾದರೆ ಮಾತ್ರ ನಮ್ಮನ್ನು ಜನಾಂಗದವರೆಂದು ಗುರುತಿಸಲ್ಪಡುವುದು. ತರುಣ ತರುಣಿಯರು ತಮ್ಮ ತಾರುಣ್ಯವನ್ನು ಜನಾಂಗದ ಹಿತದೃಷ್ಟಿಯಿಂದ, ತಮ್ಮ ಸ್ವಂತ ಹಿತ ವೃಷ್ಠಿಯಿಂದ ತಮಗಾಗಿ, ತಮ್ಮ ಜನಾಂಗಕ್ಕಾಗಿ, ಜನಾಂಗದ ಅಭಿವೃದ್ಧಿಗಾಗಿ ಜನಾಂಗಗವನ್ನು ಉಳಿಸಿ, ಬೆಳಸುವುದಕ್ಕಾಗಿ, ಮುಂದಿನ ಪೀಳಿಗೆಗಾಗಿ ಉದ್ದಾರಮಾಡಬೇಕು. ಜನಾಂಗ ಉದ್ಧಾರ ನಮ್ಮ ಉದ್ಧಾರ. ತನ್ನ ಸ್ವಂತ ಉದ್ದಾರ ಸ್ವಾರ್ಥ ಅದು ತನ್ನ ನಾಶಕ್ಕಾಗಿ ಎಂಬುದನ್ನರಿಯಬೇಕು. ತನ್ನ ಗಳಿಕೆಯ ಕಿಂಚಿತ್ ಪಾಲನ್ನು, ತನ್ನ ಕಾರ್ಯದ ಬಹುಪಾಲನ್ನು ಸಮಾಜಕ್ಕೆ, ಜನಾಂಗಕ್ಕೆ ಅರ್ಪಣೆ ಮಾಡುವುದನ್ನು ಇಂದಿನ ಯುವ ಜನಾಂಗವು ಪಾಲಿಸುವುದು ಉತ್ತಮದಲ್ಲಿ ಉತ್ತಮ.

— ಚೇಂದ್ರಿಮಾಡ ಗ. ಮುತ್ತಪ್ಪ, ಕುಶಾಲನಗರ.

---

ಜ್ಞಾನವು ಮುಕ್ತಿಯನ್ನು, ಅಜ್ಞಾನವು ಬಂಧನವನ್ನುಂಟು ಮಾಡುವುದು.

# ನೋವು

— ಬಿ. ಆರ್. ಜೋಯಪ್ಪ

ಬಿದ್ದು ಒಬ್ಬ ಸಾಮಾನ್ಯ ಬೇಸಾಯಗಾರ. ಬತ್ತದ ಬೆಳೆ ಕಟಾವು ಆದ ಕೂಡಲೆ ಗದ್ದೆಯಲ್ಲಿ ತರಕಾರಿ ಬೆಳೆಯುತ್ತಿದ್ದ. ಆದರೆ ಅವನು ಯಾವುದೇ ಬಿತ್ತನೆ ಮಾಡಿ ಅದು ಮೊಳಕೆಯೊಡೆದು ಒಂದೆರಡು ಎಲೆ ಆಗುವಷ್ಟರಲ್ಲಿ ಮೊಲಗಳು ಎಲೆಯನ್ನು ತಿಂದುಬಿಡುತ್ತಿದ್ದವು. ಅವುಗಳ ಉಪದ್ರವವನ್ನು ತಡೆಯಲು ಬಿದ್ದು ನಾನಾ ತಂತ್ರಗಳನ್ನು ಉಪಯೋಗಿಸಿದ್ದ. ಆದರೆ ಅವುಗಳು ಅವನಿಗೇ ಬುದ್ಧಿ ಕಲಿಸಿದವಷ್ಟೇ!

'ಈ ಸತಿ ಮಾತ್ರ ಮೊಲಗಳನ್ನು ಕೊಲ್ಲದಿದ್ದರೆ ಈ ಬಿದ್ದು ಬಿದ್ದುವೇ ಅಲ್ಲ' ಎಂದುಕೊಂಡ. ಬೀನ್ಸ್ ಕಾಳು ಬಿತ್ತಿ ಮೊಳಕೆಯೊಡೆದು ಒಂದರಡು ಎಲೆಗಳಾದವು. ಮೊಲಗಳಿಗೆ ಯಾರು 'ವೈರ್‌ಲೆಸ್ ಮೆಸೇಜ್' ಕೊಟ್ಟರೋ? ಬಿದ್ದು ಬೆಳಿಗ್ಗೆ ಎದ್ದು ಗಿಡಗಳನ್ನು ನೋಡುತ್ತಾನೆ, ಕೇವಲ ಕಡ್ಡಿಗಳು ಮಾತ್ರ ನಿಂತಿವೆ. 'ಇವುಗಳ್ಗೆ ಮಾರಿಬಡಿಯ' ಎಂದು ಬಯ್ದ. ಆದರೆ ಬಿದ್ದು ತನ್ನ ಹಠ ಬಿಡಲಿಲ್ಲ. ಉಳಿದ ಕಾಳನ್ನೂ ಬಿತ್ತಿದ. ಈ 'ಕೋಲು ಮೇಸ್ತ್ರಿ'ಗೆ ಹೆದರಿಯಾವೆ?ರಾತ್ರಿ ಒಂದೆರಡು ಸತಿ ತೋಟದ ಕಡೆ ಎಂದುಕೊಂಡ. ಬೆಳಿಗ್ಗೆ ತೋಟದ ಕಡೆ ಹೊರಟ. ನೋಡುತ್ತಾನೆ: ಗಿಡಗಳು ಧ್ವಂಸ! ಹೊಟ್ಟೆಗೆ ಬೆಂಕಿ ಬಿದ್ದಂತಾಯಿತು.

ಈಗ ಇವಕ್ಕೆ ಗುಂಡೇ ಮದ್ದು ಎನ್ನುತ ಬಿದ್ದು ಕೋವಿಯನ್ನು ಜೊತೆ ಮಾಡಿದ. ನೆಲದಲ್ಲಿ ಒಳಿ ಮಾಡಿ ಸಂಜೆ ಒಳಿಕುಳಿತ. ಮಸುಕಾದ ಹೊತ್ತು ಗಾಢಾಂದಕಾರಕ್ಕೆ ತಿರುಗಿತು. ಮೊಲದ ಸುಳಿವಿಲ್ಲ! ದರಿದ್ರ ಮೊಲ ಎಂದು ಶಪಿಸಿದ. ಮತ್ತೂ ಕುಳಿತ. ಚಂದ್ರ ಇನ್ನೇನು ಮೂಡುವ ಹೊತ್ತು. ಎಂಥದೋ ಒಂದು ಆಕಾರ ಚಲಸಿದಂತಾಯಿತು. ಅದು ಜಿಗಿದು ಕುಳಿತಿತು. ಇದು ಮೊಲವೇ ಹೌದು. ಇನ್ನೇಕೆ ತಡಮಾಡಲಿ ಎನ್ನುತ್ತ ಗುಂಡು ಹಾರಿಸಿದ. ಓಡಿ ನೋಡಿದ. ಸಧ್ಯ ಅದು ಅಲ್ಲೇ ಬಿದ್ದಿತ್ತು. 'ನಿನ್ನ ಹೊಟ್ಟೆ ಹೊಡ್ಡೋಗ, ನನ್ನ ಬೀನ್ಸ್ ಗಿಡ ತಿಂದೂ ತಿಂದು ಕೊಬ್ಬಿದ್ದೀಯ' ಎನ್ನುತ್ತ ಎತ್ತಿಕೊಂಡ. ಅರರೇ! ಇದು ಮೊಲವಲ್ಲ, ಕತ್ರಿ ಬೆಕ್ಕು! ಏನಾದರಾಗಲಿ ಒಂದು ಗರಮ್ಮಾಗಿ ಹುಳಿಕಾಯಿಸಿದರಾಯ್ತು ಎನ್ನುತ್ತ ಖುಷಿಗೊಂಡ. 'ಗುರಿ ತಪ್ಪದ ಗಂಡು' ಅಂತ ಹೆಂಡತಿ ದೃಷ್ಟಿ ನಿವಾಳಿಸಿ ಒಳಗೆ ಕರಕೊಂಡಾಳಲ್ಲ ಎಂದುಕೊಂಡ.

"ಪಾತೀ, ಲೇ ಪಾತೀ" ಪಾತಿಗೆ ಗಡದ್ದು ನಿದ್ದೆ.

"ಬಾಗಿಲು ತೆಗಿಯೇ ಪಾತಿ" ಎಂದು ಬೊಬ್ಬೆ ಹಾಕಿದ.

ಬಿದ್ದು ತನ್ನ ಹೆಂಡತಿ ಪಾರ್ವತಿಯನ್ನು ಪ್ರೀತಿಯಿಂದ "ಪಾತೀ" ಅಂತ ಕರೆಯುತ್ತಿದ್ದ. ಪಾತಿ ಬಾಗಿಲು ತೆರೆದಳು. ಆಕೆಯ ಕೈಯಲ್ಲಿ ದೀಪವಿತ್ತು. ಬಿದ್ದು ತನ್ನ ಕೈಯಲ್ಲಿದ್ದ ಕತ್ರಿಬೆಕ್ಕನ್ನು ಅವಳ ಕೈಗೆ ಕೊಟ್ಟ. ಪಾತಿ ಹೌಹಾರಿದಳು.

"ನಿಮ್ಮ ತಲೆ. ನಿಮ್ಗೆ ಬೇಟೆ ಕಲ್ಸಿದ್ದು ಯಾರು? ಕತ್ರಿ ಬೆಕ್ಕಿಗೂ ಮನೆ ಬೆಕ್ಕಿಗೂ ವ್ಯತ್ಯಾಸ ತಿಳೀದ ಬೇಟೆಗಾರ ಯಂಥ ಬೇಟೆಗಾರ? ಅಯ್ಯಯ್ಯೋ ನನ್ನ ಮುದ್ದಿನ ಬೆಕ್ಕನ್ನ ಕೊಂದ್ರಾ..." ಅಂತ ಕಿರುಚಾಡಿದಳು."ಓ! ಹೌದಲ್ಲೇ, ತುಂಡು ಕಿವೀ ಉದ್ದ ಬಾಲದ ಇದನ್ನು ಕತ್ರಿ ಬೆಕ್ಕಂತ ತಿಳ್ಕೊಂಡಿದ್ನಲ್ಲೇ" ಎನ್ನುತ್ತ ಬಿದ್ದೂ ಜಗಲಿಯ ಮೇಲೆ ಕುಕ್ಕರಿಸಿದ.

ಮನೆ ಬೆಕ್ಕು ಹೋದ ಮೇಲೆ ಇಲಿಗಳ ಕಾಟವೂ ಹೆಚ್ಚಾಯಿತು. ಮೊಲಗಳು ಮಾತ್ರ ಮಾಮೂಲಿಯಾದುವು. ತಲೆ ಕೆಟ್ಟಂತಾದ ಬಿದ್ದು ಕುಟ್ಟಜ್ಜನೊಡನೆ ಮೊಲಗಳ ಉಪದ್ರವ ಕುರಿತು ಹೇಳಿಕೊಂಡ. ಕುಟ್ಟಜ್ಜ ಸುಮಾರು ಅರವತ್ತರ ಗಡಿದಾಟಿದ ಮುದುಕ. ಆ ಅಜ್ಜನ ತಲೆ ಯಾವಾಗಲೂ "ಇಲ್ಲ ಇಲ್ಲ ಇಲ್ಲಾಂತ" ಅಲುಗಾಡುತ್ತಿರುವುದು ಮಾಮೂಲಿ. ಅಜ್ಜನ ಬಾಯಲ್ಲಿ ಎರಡೇ ಎಡಡು ಬಾಚಿ ಹಲ್ಲುಗಳನ್ನು ಬಿಟ್ಟರೆ ಬಾಕಿ ಇಲ್ಲ. ಆ ಹಲ್ಲುಗಳೋ ಜಂತಿಯಿಂದ ಜಾರಿ ತುಟಿಯ ಹೊರಗೆ ಕುಳಿತಿದ್ದವು. ಮಾತನಾಡುವಾಗ ಆ ಹಲ್ಲುಗಳು ಕಸಕಸಾಂತ ಅಲುಗಾಡುತ್ತಿದ್ದವು. ಎಲೆ ಅಡಿಕೆ ಜಗಿದು ಉಗುಳಿದರೆ ಆ ಕೆನ್ನೀರು ಗಡ್ಡಕ್ಕಾಗಿ ಇಳಿದು ತೊಟ್ಟಿಕ್ಕುತ್ತಾ ಎದೆ ಭಾಗಕ್ಕಾಗಿ ಜಾರಿ ಮುಂದೆ ಹೋಗುತ್ತಿತ್ತು. ಅದೇನೆ ಇರಲಿ, ಆ ಅಜ್ಜ ಮೊಲ ಹಿಡಿವ ಉಪಾಯ ನಿಮಗೆ ಗೊತ್ತುಂಟಾ?

"ನೀ ಯಂತಯಾ ಬಿದ್ದು. ಮೊಲ ಹಿಡಿಯಕ್ಕೆ ನಾನೊಂದು ಪ್ಲಾನು ಹೇಳ್ತೇನೆ. ನಿನ್ನತ್ರ ಕೋವಿ ಉಂಟಾ?"

"ಉಂಟು"

"ನಾಯಿಗಳುಂಟಾ"

"ಉಂಟು"

"ಕರೆಕಾಡುಂಟೋ"

"ಉಂಟು"

"ಮತ್ತಿನ್ನೇನು, ಮೊಲ ಸಿಕ್ಕೂಂತ ತಿಳ್ಕಾ"

"ನಾ ಯಂತ ಮಾಡ್ಬೇಕು ಚಾಂಪಾ" ಅಂತ ಬಿದ್ದು ದುಂಬಾಲು ಬಿದ್ದ. "ನೀನ್ ಕರೆಕಾಡಲ್ಲಿ ನಾಯ್ನ ಚೂ ಬಿಡು. ಅದು ಬೊಗುಳ್ತಾ ಓಡ್ವಾಗ ನೀನೂ ಜೊತ್ಗೆ ಓಡು. ಕೈಲೊಂದು ಸಣ್ಣ ಹಗ್ಗ ಇರ್ಲಿ. ಕೋವಿ ಹಿಡ್ಕೊಂಡು ರೆಡಿಯಾಗು. ಒಂದೋ ಮೊಲ ಜಿಗಿದು ಓಡೋಗ್ತದೆ. ಒಂದೋ ನಾಯಿ ಹಿಡ್ದಾತು. ಇಲ್ಲಾ ನೀನ್ ಗುಂಡು ಹೊಡೀಬೌದು." ಬಿದ್ದುವಿಗೆ ಒಳಗೊಳಗೇ ತರುಪುಕು. ಯಾಕೆ ಗೊತ್ತಾ? ಮೊಲದ ಜೊತೆ ನಾಯಿ ಓಡೋವಾಗ ಗುಂಡು ಹೊಡೆದ್ರೆ ಅದು ಮೊಲಕ್ಕೇ ಬಡೀತದೇಂತ ಯಾವ ಗ್ಯಾರಂಟಿ? ಹಿಂದೊಮ್ಮೆ ಮನೆ ಬೆಕ್ಕನ್ನೇ ಹೊಡ್ದ ಭೂಪ ತಾನೆ! ಅದಿರ್ಲಿ. ಬಿದ್ದುಗೆ ಸಮಸ್ಯೆಕಾಡಿತು. ಬೇಟೆಗಾರನ ಕೈಲಿ ಕತ್ತಿ, ಕೋವಿ ಇರೋದೇನೋ ಸರಿ. ಆದ್ರೆ ...

"ಚಾಂಪಾ ಕೈಲಿ ಹಗ್ಗ ಇರ್ಲಿ ಅಂದ್ರಲ್ಲ, ಯಾಕೆ"?

"ಅಯ್ಯೋ ನೀನೊಬ್ಬ ಪೆದ್ದು. ಮೊಲ ಕರೆ ಕಾಡಲ್ಲಿ ಪೊದೆಯೊಳ್ಗೆ ಮರಿ ಹಾಕಿರುತ್ತೆ. ನಾಯಿ ಬೊಗಳ್ತಾ ಓಡ್ವಾಗ

ಕಣ್ಣಿಲ್ಲದವನಿಗೆ ಕನ್ನಡಿಯ ಉಪಯೋಗವಿಲ್ಲ, ತಿಳಿವು ಇಲ್ಲದ ಮೂಢನಿಗೆ ಶಾಸ್ತ್ರದಿಂದ ಉಪಯೋಗವಿಲ್ಲ.

ಮೊಲ ಹೆದ್ರಿ ಮರೀನ ಬುಟ್ಟು ಓಡುತ್ತೆ. ನಿನ್ನ ಗುಂಡ್ಗೆ ಆ ಮೊಲ ಸಿಗ್ದೇ ಇದ್ರೆ ಆ ಮರಿ ಉಂಟಲ್ಲ ಅದ್ನ ಹಿಡ್ಕೊ. ಮರೀನ ಹಿಡ್ಕೊಂಡು ಅದ್ರ ಕುತ್ತಿಗೆಗೆ ಈ ಹಗ್ಗನ ಹಾಕು. ಮರೀನ ಹಿಡ್ಕೊಂಡು ಸೀದ ಮನೆಗೆ ಬಾ. ನಾಯಿನ ಮನೇಲಿ ಕಟ್ಟು. ಸಂಜೆ ಟೇಮಲ್ಲಿ ಆ ಮರಿ ಎಲ್ಲಿತ್ತೋ ಅಲ್ಲಿಗೆ ಹೋಗಿ ಅಲ್ಲೆ ಸ್ವಲ್ಪ ಬಯ್ಲು ಇದ್ದೆಡೆ ಗೂಟಕ್ಕೆ ಮರೀನ ಕಟ್ಟು. ನೀನು ಸ್ವಲ್ಪ ದೂರದಲ್ಲಿ ಕಾಣ್ದಂಗೆ ಕೋವಿ ಹಿಡ್ಕೊಂಡು ಕೂತ್ಕೊ. ಮರೀನ ಹುಡುಕ್ತಾ ಹುಡುಕ್ತಾ ತಾಯಿ ಮೊಲ ಅಲ್ಗೇ ಬಂದೇ ಬರ್ತದೆ. ಮರೀ ಹತ್ರ ಬಂದು ಅದ್ನ ಮುದ್ಮಾಡ್ತಲ್ಲ ಆಗ ಗುಂಡು ಹೊಡಿ. ತಿಳಿತಾ ಬಿದ್ದಣ್ಣಾ" ಅನ್ನುತ್ತಾ ಅಂಗೈ ಮೇಲೆ ಹೊಗೆಸೊಪ್ಪಿಟ್ಟು ಸ್ವಲ್ಪ ಸುಣ್ಣ ಬೆರೆಸಿ ತೀಡಿ ಮುದ್ದೆ ಮಾಡಿ ಹೊರ ಇಣುಕಿ ತುಟಿ ಮೇಲೆ ಕುಳಿತ ಹಲ್ಲಿಗೆ ಉಜ್ಜಿ ಬಾಯೊಳಗಿಟ್ಟು ಅಂಗೈಗಳನ್ನು ತಟ್ಟಿ ಮುಗುಳ್ನಕ್ಕ.

ಬಿದ್ದು, ಕುಟ್ಟಜ್ಜನ ಉಪಾಯವನ್ನು ನೆನೆದು " ಈ ಚಾಂಪನ ತಲೆ ಅಂದ್ರೆ ತಲೆ' ಅಂದುಕೊಂಡ. ನಂಗೂ ಪಾಲುಂಟು ಗೊತ್ತುಂಟಲ್ಲಾ ಅಂತ ಅಜ್ಜ ನಕ್ಕ. ಆಗ ಬಾಯೊಳಗಿಂದ ತುಟಿಯನ್ನು ಸರಿಸಿದ ಕೆನ್ನೀರು ಪಚಕ್ಕನೆ ಹೊರಚೆಲ್ಲಿತು.

ಬಿದ್ದುವಿಗೆ ಆ ದಿನ ಸಂಭ್ರಮವೋ ಸಂಭ್ರಮ. ರಾತ್ರಿಯ ಊಟಕ್ಕೆ ಮೊಲದ ಮಾಂಸ ಎಂದು ಗುಣುಗುಣು ಅಂದುಕೊಳ್ಳುತ್ತ ಬೇಟೆಗೆ ತಯಾರಿ ಮಾಡಿದ. ಬುಗುರಿ ಹಗ್ಗದಂಥ ಹಗ್ಗವೊಂದನ್ನು ಜೇಬಿಗೆ ತುರುಕಿಕೊಂಡ. ಕೋವಿ ತಕ್ಕೊಂಡು ನಾಯನ್ನು ಬಿಟ್ಟುಕೊಂಡು "ಪಾಶಿ"ಗೆ ಹೇಳಿ ಹೊರಟ. ನಾಯಿಗಂತೂ ಎಲ್ಲಿಲ್ಲದ ಉತ್ಸಾಹ. ಅಂಗಳದಲ್ಲಿ ಕೋಳಿಯನ್ನು ಅಟ್ಟುವಲ್ಲಿಂದ ನಾಯಿಯು ಬೇಟೆ ಶುರುಮಾಡಿತು.

ಗದ್ದೆ ಪಕ್ಕದ ಕರೆಕಾಡಿನತ್ತ ನಾಯಿಯನ್ನು ಚೂ ಬಿಟ್ಟ. ಕೆಲವು ಚೋರೆ ಹಕ್ಕಿಗಳು ಹಾರಿದವು. ಹುಲ್ಲು ಬೇರನ್ನು ಚುಕ್ಕಿ ತಿನ್ನುತ್ತಿದ್ದ ನಾಡು ಹಂದಿಗಳು 'ಗೊಗ್'ಎಂದು ಜಿಗಿದು ಕಣ್ಮರೆಯಾದವು. ಆದರೆ ಮೊಲಗಳು ಮಾತ್ರ ಪತ್ತೇ ಇಲ್ಲ! ಕದ್ದು ಹೋದ ಬಳಿಕ ಕಳ್ಳರನ್ನು ಹುಡುಕಿದಂತಾಯ್ತೇನೊ ಎಂದು ಯೋಚಿಸುತ್ತಿರಬೇಕಾದರೆ ನಾಯಿ ಬೊಗಳಿತು. ಕೂಡಲೆ ಬಿದ್ದು ಅತ್ತ ಓಡಿ ಹೋದ. ಒಂದು ಬೂದು ಬಣ್ಣದ ದೊಡ್ಡ ಮೊಲ ಚೆಂಡು ನೆಗೆದಂತೆ ನೆಗೆದು ನೆಗೆದು ಓಡುತ್ತಿತ್ತು. ನಾಯಿಯಂತೂ ಹಿಡಿದೇಬಿಟ್ಟೆ ಎನ್ನುವಂತೆ ಸಾಗಿತು. ಬಿದ್ದು ಕೋವಿ ಎತ್ತಿ ಗುರಿ ಹಿಡಿದ. ಆದರೇನು? ಗುಂಡು ಹೊಡೆದರೆ ಮೊಲದ ಜೊತೆಗೆ ನಾಯಿಯೂ ಸಾಯುತ್ತದೆಂಬ ಸಮಸ್ಯೆ ಕಾಡಿತು. ಕೋವಿಯನ್ನು ಗುರಿಯಿಂದ ಹಿಂದಕ್ಕೆ ತೆಗೆದ. ಸ್ವಲ್ಪ ಹೊತ್ತಿನಲ್ಲಿ ನಾಯಿಯ 'ಕುಯ್ಯೋ ಕುಯ್ಯೋ' ಶಬ್ದ ಕೇಳಿತು.

ಓ! ನಾಯಿಯೇ ನರಳುತ್ತಿದೆ! ಮೊಲವೇನಾದರೂ ತಿರುಗಿ ನಿಂತು ನಾಯಿಗೆ ಕಚ್ಚಿತಾ? ಏನೇನೋ ಯೋಚಿಸಿ ನಾಯಿಯು ನರಳಾಡುವ ಸದ್ದಿನ ಕಡೆ ಓಡಿ ನೋಡಿದರೆ ನಾಯಿ ಓಡುವ ರಭಸದಲ್ಲಿ ಮರಕ್ಕೆ ಢಿಕ್ಕಿ ಹೊಡೆದು ಬಿದ್ದುಕೊಂಡು ಉರುಳಾಡುತ್ತಿದೆ. ಬಿದ್ದುವನ್ನು ಕಂಡೊಡನೆ 'ಕಂಯ್ ಕಂಯ್' ಅನ್ನುತ್ತ ಬಂದು ಇವನ ಕಾಲ ಸಂದಿಗೆ ನುಗ್ಗಿತು. ಅದರ ತಲೆ ಮೈಯನ್ನು ಸವರಿದ ಬಿದ್ದುವಿಗೆ ಕುಟ್ಟಜ್ಜನ ಹಲ್ಲನ್ನು ಕುಟ್ಟಿ ಮುರಿದು ಬಿಡಬೇಕೆನ್ನುವಷ್ಟು ಸಿಟ್ಟು ಬಂತು. ಕೊನೆಯ ಪ್ರಯತ್ನವಾಗಿ ಮೊಲ ಓಡಿದ ಕಡೆ ಹತ್ತಾರು ಹೆಜ್ಜೆ ಹಾಕಿ ನೋಡಿದ. ಪ್ರಯೋಜನ ಕಂಡಿಲ್ಲ, ತಿರುಗಿ ಬಂದ. ಹಾಗೇ ಒಂದು ಪೊದೆಯತ್ತ ನುಗ್ಗಿದ. ಅಲ್ಲೊಂದು ಮರ. ಆ ಮರದ ಬೇರು ಅಂಕು ಡೊಂಕಾಗಿ ಸುತ್ತಿ ಅತ್ತ ನೆಲದೊಳಗೆ ನುಗ್ಗಿತ್ತು. ಆ ಬೇರಿನ ಸಂದಿಯಲ್ಲಿ ಏನೋ ಕಂಡಂತಾಗಲು ಮತ್ತೂ ಇಣುಕಿದ. ಮೂರು ಮುದ್ದಾದ ಮೊಲದ ಮರಿಗಳು!

"ಕುಟ್ಟಜ್ಜನ ಪ್ಲಾನು ಕರೆಟ್!" ಬಿದ್ದುವಿಗೆ ಅಜ್ಜನ ಮೇಲೆ ಈಗ ಪ್ರೀತಿ ಉಕ್ಕಿತು. ಮರಿಗಳನ್ನು ಹಿಡಿಯಲು ಅತ್ತ ಬಗ್ಗಿದ. ಇವನ ಕಂಡು ಮರಿಗಳು ಅತ್ತಿತ್ತ ಓಡಲೂ ಪ್ರಯತ್ನಿಸಲಿಲ್ಲ. ಮೂರು ಮರಿಗಳ ಕಿವಿಗಳನ್ನು ಒಂದು ಮಾಡಿ ಬಲಗೈಯಲ್ಲಿ ನೇತಾಡಿಸಿದ. ಅವುಗಳು ವಿಲವಿಲ ಒದ್ದಾಡಿದವು. ಎಡ ಕಂಕುಗಳಲ್ಲಿ ಕೋವಿಯನ್ನು ಅದುಮಿ ಹಾವು ಸುತ್ತಿದಂತೆ ಕೋವಿಯನ್ನು ಎಡಗೈಯಿಂದ ಸುತ್ತಿ ಹಿಡಿದುಕೊಂಡು ಮನೆಯತ್ತ ಹೊರಟ. ನಾಯಿಯು ತನಗಾಗಿದ್ದ ನೋವನ್ನೂ ಮರೆತು ಹಿಂದೆ ಮುಂದೆ ನೆಗೆಯುತ್ತ ಮರಿಗಳನ್ನು ಹಿಡಿಯಲು ಪೇಚಾಡುತ್ತಿತ್ತು. ಕೋವಿಯ ಕೊಳದಿಂದ ಚುಚ್ಚುತ್ತ ಓಡಿಸಲು ಯತ್ನಿಸಿದ, ಆದರೆ ನಾಯಿ ಬಿಡುವ ಹಾಗಿಲ್ಲ. ಮತ್ತೆ ಮತ್ತೆ ಹಾರಿ ಹಾರಿ ಹಿಡಿಯಲು ನೋಡಿತು. ಬಿದ್ದು ನಾಯಿಗೆ ಒದ್ದ. 'ಕಂಯ್ಯೀ' ಎನ್ನುತ್ತ ದೂರ ಸರಿಯಿತು.

ಮನೆ ತಲುಪಿದ ಬಿದ್ದು ಎರಡು ಮರಿಗಳನ್ನು ಮುಚ್ಚಿದ. ಮತ್ತೊಂದನ್ನು ಕೈಯಲ್ಲಿ ಹಿಡಿದುಕೊಂಡ. ನಾಯಿಯನ್ನು ಕಟ್ಟಿಹಾಕಲು ಹೆಂಡತಿಗೆ ಹೇಳಿ ಹೊರಟ. ಕೈಯಲ್ಲಿದ್ದ ಮರಿಯ ಕುತ್ತಿಗೆಗೆ ಬುಗರಿ ಹಗ್ಗವನ್ನು ಹಾಕಿ, ಕೋವಿ ಹೊತ್ತುಕೊಂಡು ಮೊಲದ ಮರಿಗಳಿದ್ದ ಪೊದೆಯತ್ತ ನಡೆದ. ಇತ್ತ ಮನೆಕಡೆ ನಾಯಿಯ ಬೊಗಳಾಟ ಸ್ವಲ್ಪ ಹೊತ್ತಿನಲ್ಲಿ ನಿಂತಿತು.

ಮರಿಯನ್ನು ಪೊದೆಗಿಂತ ಸ್ವಲ್ಪ ದೂರದಲ್ಲಿ ಕಟ್ಟಿಹಾಕಿದ. ಆ ಮರಿ ಅತ್ತಿತ್ತ ಎಳೆದಾಡುತ್ತಿತ್ತು. "ನಿಲ್ಲು ಒಳ್ಳೆ ಜೀವ ಹೋದಂಗೆ ಆಡ್ತೀಯ" ಅಂತ ಮರಿಗೆ ಬಯ್ದು ದೂರದಲ್ಲಿ ಮರೆಯಾಗಿ ಕುಳಿತ. ಮರಿ ಎಳೆದಾಡುತ್ತಲೇ ಇತ್ತ. ಬಿದ್ದು ಮರೆಯಲ್ಲಿ ಮರಿಯತ್ತ ಗುರಿ ಮಾಡಿಕೊಂಡು ತಾಯಿ ಮೊಲದ ಬರುವನ್ನೇ ನೋಡುತ್ತಿದ್ದ. ಸಂಜೆ ಸಮೀಪಿಸುತ್ತಿತ್ತು. "ಈ ದರಿದ್ರ ಮೊಲಕ್ಕೆ ತನ್ನ ಮರಿಗಳ್ನ ಕೂಡ ಗ್ಯಾನ ಇಲ್ಲ" ಎಂದುಕೊಂಡ. ತೊಡೆಯನ್ನು ಪರಪರ ಕೆರೆದುಕೊಂಡ. ತಾಯಿ ಮೊಲ ಮರಿಯ ಹತ್ತಿರ ಬರುತ್ತಾ ಇರುವಾಗ ಗುಂಡು ಹೊಡೀಬೆಕು. ಮರಿಗೆ ಹಾಲು ಕೊಡುತ್ತಿರುವಾಗ ಹೊಡೀಬಾರ್ದು. ಯಾಕೆಂದರೆ ಗುಂಡಿಗೆ ಮರಿಯೂ ಸತ್ತು ಹೋಗುತ್ತದೆ. ಅದನ್ನು ಕೊಲ್ಲಬಾರದು, ಸಾಕಬೇಕು ಎಂಬ ಆಸೆ ಬೇರೆ ಬಿದ್ದುವಿಗೆ.

---

ವಿಧವೆಯ ಕಣ್ಣೀರನ್ನು ತೊಡೆಯಲಾರದ, ದೀನರ ಹಸಿವನ್ನು ನೀಗಿಸಲಾರದ ದೇವರಲ್ಲಾಗಲಿ, ಧರ್ಮದಲ್ಲಾಗಲಿ ನನಗೆ ನಂಬಿಕೆ ಇಲ್ಲ. —ಸ್ವಾಮಿ ವಿವೇಕಾನಂದ.

ಸಂಜೆ ಸಮೀಪಿಸುತ್ತಾ ಇತ್ತು. ಒಮ್ಮೆ ಆಪತ್ತಿನಿಂದ ತಪ್ಪಿಸಿಕೊಂಡಿದ್ದ ಮೊಲ ಮರಿಗಳನ್ನು ಹುಡುಕಿಕೊಂಡು ಬಂದೇ ಬಂತು. ಎದೆಯಲ್ಲಿ ಮರಿಗಳ ಬಾಯಿಗಾಗಿ ಹಾಲು ಹಾತೊರೆಯುತ್ತಿತ್ತು. ಆದರೆ ಜೀವ ಭಯ. ಮತ್ತೆ ನಾಯಿ ಬರಬಹುದಾ? ಇಲ್ಲ ಮರಿಗಳನ್ನು ಆ ಕೂಡಲೆ ನೋಡಬೇಕೆಂಬ ಆಸೆ ಹೆಚ್ಚಾಯಿತು. ಹೀಗೆ ಯೋಚಿಸುತ್ತಿರುವಾಗಲೇ ತನ್ನ ಗೂಡಿನ ಸಮೀಪ ಬಂದು ಆಗಿತ್ತು. ಆದರೆ ಗೂಡಿನಲ್ಲಿ ಮರಿಗಳೇ ಇಲ್ಲ. ಅತ್ತಿತ್ತ ಮೂಸಿತು. ಅಲ್ಲೆಲ್ಲೋ ಇರುವ ಸಾಧ್ಯತೆಯನ್ನು ಅರಿಯಿತು. ವಾಸನೆ ಹಿಡಿಯಿತು. ವಾಸನೆ ಬಂದತ್ತಲೇ ನಡೆಯಿತು. ಅತ್ತ ಕಡೆ ಒಂದು ಮರಿ ಇತ್ತ ಬರಲು ಎಳೆದಾಡಿಕೊಳ್ಳುವುದು ಕಂಡಿತು. ಓ! ಹೌದು, ನನ್ನ ಮುದ್ದು ಕಂದನೇ ಅದು. ಉಳಿದವೆಲ್ಲಿ? ಸಧ್ಯ ಈ ಕಂದನನ್ನಾದರೂ ಅಪ್ಪಿ ಮುದ್ದಾಡುತ್ತೇನೆಂದುಕೊಂಡು ಹಿಂದು ಮುಂದು ನೋಡದೆ ಆ ಮರಿಯೆಡೆಗೆ ಓಡಿ ಬಂತು. ಹಸಿದ ಮರಿ ಅಮ್ಮನ ಹಾಲಿಗಾಗಿ ತವಕಿಸುತ್ತಿತ್ತು. ಅಮ್ಮನನ್ನು ಕಂಡ ಮರಿ ತಾಯಿಯನ್ನು ಕರೆಯಿತು. 'ಓ ಬಂದೇ ನನ್ನ ಚಿನ್ನಾ' ಅನ್ನುವಂತೆ ಅಪ್ಪಿ ಮುದ್ದಾಡಬೇಕೆನ್ನುವಷ್ಟರಲ್ಲಿ "ಢಂ....." ಗುಂಡಿನ ಸದ್ದು! ಆ ಗುಂಡಿನ ಹೊಗೆಯಲ್ಲಿ ತಾಯಿ ಮೊಲ ಮರಿಯನ್ನು ಅಪ್ಪಿಕೊಳ್ಳಲಾರದೆ ಸತ್ತಿತು. ಮರಿ ಎಳೆದಾಡಿ ಮುದುಡಿ ಕುಳಿತಿತು. ಬಿದ್ದು ಸತ್ತ ಮೊಲವನ್ನು ಎತ್ತಿಕೊಂಡ. ಮರಿಯನ್ನು ಬಿಚ್ಚಿ ಅದರ ಕಿವಿಯನ್ನು ಹಿಡಿದುಕೊಂಡ. ಸತ್ತ ತಾಯಿ ಮೊಲವನ್ನು ಹೆಗಲಮೇಲಿಟ್ಟುಕೊಂಡು ಮನೆಯತ್ತ ನಡೆದ.

ಮನೆಯಲ್ಲಿ ನಾಯಿ ಸರಪಳಿಯನ್ನು ಬಿಚ್ಚಿಕೊಂಡಿತ್ತು. ನಾಲಗೆಯನ್ನು ಹೊರ ಹಾಕಿ ಬಾಯನ್ನು ನೆಕ್ಕಿಕೊಳ್ಳುತ್ತಿತ್ತು. ಮನೆಯೊಳಗೆ ಮುಚ್ಚಿದ್ದ ಎರಡು ಮರಿಗಳೂ ನಾಯಿಯ ಹೊಟ್ಟೆ ಸೇರಿದ್ದವು.

ಹೆಂಡತಿಯನ್ನು ಕರೆದು ಬೇಟೆಯ ಬಗ್ಗೆ ಕೊಚ್ಚಿ ಕೊಳ್ಳತೊಡಗಿದ. ಸತ್ತ ಮೊಲವನ್ನು ಮೇಜಿನ ಮೇಲಿಡಲು ಅವನ ಹೆಂಡತಿ ಬಿದ್ದುವಿನ ಎಡಭಾಗದ ಎದೆಯ ಮೇಲಿನ ಅಂಗಿಯನ್ನು ನೋಡುತ್ತಾಳೆ. ಆ ಅಂಗಿ ಹಾಲಿನಿಂದ ಒದ್ದೆಯಾಗಿತ್ತು. ಹೌದು, ಮರಿಗಳಿಗಾಗಿ ತುಂಬಿಕೊಂಡಿದ್ದ ತಾಯಿ ಮೊಲದ ಕೆಚ್ಚಲಿನಿಂದ ಹಾಲು ಬಿದ್ದುವಿನ ಎದೆಯ ಮೇಲೆ ಹರಿದಿತ್ತು.

ಆಕೆ ನಿಟ್ಟುಸಿರು ಬಿಟ್ಟು ಗಂಡನನ್ನು ದಿಟ್ಟಿಸಿದಳು. ಆ ನೋಟದಲ್ಲಿ ತನ್ನ ಸತ್ತ ಕಂದನ ನೆನಪು ತುಂಬಿಕೊಂಡಿತ್ತು.

---

### ಶುಭ ವಿವಾಹ

ಚೆಟ್ಟಳ್ಳಿ ಗ್ರಾಮದ ಪೇರಿಯನ ಜಯಾನಂದ ಇವರ ಮಗಳು ಚಿಂತನ ಮತ್ತು ಸುಳ್ಯ ತಾಲೋಕು ಮೊಣಿಬೆಟ್ಟು ಪುರುಶೋತ್ತಮ ಗೌಡರ ಮಗ ಸುಬ್ರಮಣ್ಯ ಇವರ ವಿವಾಹವು ದಿನಾಂಕ 9-2-2001 ರಂದು ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣ ಮಂಟಪದಲ್ಲಿ ವಿಜೃಂಭಣೆಯಿಂದ ನಡೆಯಿತು.

## ನಾ ಕಂಡ ಲೋಕ

ಕತ್ತಲೆಯ ಕಾರ್ಮೋಡಗಳ ನಡುವೆ
ಆಕರ್ಷಿಸುತಿತ್ತು ಒಂದು ಸುಂದರವಾದ
ಮಿನುಗುವ ನಕ್ಷತ್ರ,
ನಯನ ಮನೋಹರವಾದ ಆ ನಕ್ಷತ್ರ
ಸಂಪೂರ್ಣವಾಗಿ ತನ್ನ ಮನವನ್ನು
ಸೂರೆಗೊಂಡಿತ್ತು.
ತನಗಾಗಿಯೇ ಜನಿಸಿದೆಯೋ
ಎಂಬಂತೆ ತನ್ನೆಡೆ ಮನವನ್ನು
ಆಕರ್ಷಿಸಲಾರಂಭಿಸಿತು,
ನಕ್ಷತ್ರದ ಕಾಂತಿಗೆ ತನ್ನನ್ನೇ ಮರೆತು
ಸಂಪೂರ್ಣವಾಗಿ ಅದರಲ್ಲೇ
ಮುಳುಗಿ ಹೋದೆನು,
ತನ್ನೊಬ್ಬನಿಗೆ ಮಾತ್ರ ಕಾಣಿಸುತ್ತಿರುವುದು
ಎಂಬ ನಂಬಿಕೆ ಮನದಲ್ಲಿ ಮೂಡಿತ್ತು.
ಮೊದ ಮೊದಲು ತನ್ನ ಅಂತರವನ್ನು
ಬಾಹ್ಯವಾಗಿ ಮತ್ತು ಆಂತರಿಕವಾಗಿ ಗೋಚರಿಸಿತ್ತು,
ಆದರೂ ಕಾಂತಿಯ ಆಕರ್ಷಣೆಯಿಂದ
ಏನು ತಿಳಿಯದ ಮುಗ್ಧನ ಹಾಗೆ
ತನ್ನನ್ನೇ ಅರ್ಪಿಸಿದೆ,
ಕಾಲ ಕಳೆದಂತೆ ಆ ನಕ್ಷತ್ರದ
ಸವಿಯನ್ನು ಸವಿಯಲು ನಾನೊಬ್ಬನೇ
ಅಲ್ಲ ಹಲವಾರು ಜೀವಿಗಳು ಇವೆ
ಎಂದು ಮನವರಿಕೆಯಾಯಿತು,
ನಂತರದ ದಿನಗಳಲ್ಲಿ ಹಲವು
ದಿವಸಗಳಿಗೊಮ್ಮೆ ಮಿನುಗುವ
ಆ ನಕ್ಷತ್ರವನ್ನು ನೋಡಿ ತನ್ನ ಹುಚ್ಚು
ತನಕ್ಕೆ ಏನೆಂದು ಹೇಳಬೇಕು ತಿಳಿಯಲಿಲ್ಲ.

ಮುಕ್ಕಾಟಿರ ಎಸ್. ರವಿಕುಮಾರ್ ಕೆ. ಆರ್. ನಗರ.

---

ಕೃತಜ್ಞತೆಯಿಲ್ಲದ ಮಕ್ಕಳು ಹಾವಿನ ಹಲ್ಲಿನಂತೆ ಘೋರ ವಿಷ. — ಷೇಕ್ಸ್‌ಪಿಯರ್.

# ವಾಂಟೆಡ್ ಮಿಸ್ಟರ್ ರಾಜು : [ನಮ್ಮ ರಾಜು ಮಂಜ ಕಥೆ]

ಲೇಖಿನ : ಶಂಕರನ ಬಸಪ್ಪ

**ಧಾರಾವಾಯಿ - 27**

ಶಾಂತಿ ಗೂಡೆನ ಮನೆಮುಂದೆ ನಿಂತ್‌ಕಂಡ್ ಈ ಶಾಸ್ತ್ರಿಜೀ. ಜೋರಾಗಿ ಹೇಳ್ತಿತ್ತ್ ಈ ಗೃಹದಲ್ಲಿ ಲಕ್ಷ್ಮಿಕಳೆ ತುಂಬ್ಯೆತೆ, ರಾಜಯೋಗಕೂಡಿ ಬಂದ್ಯೆತೆ, ಶನಿಗ್ರಹಚಾರ ಕಳ್ದ್ ಶುಕ್ರದೆಸೆ ಸುರುಆಗ್ಯೆತೆ. ಇನ್ನ್ 10 ದಿನದಲ್ಲಿ ಇಲ್ಲೊಂದು ಕನ್ಯೆಗೆ ಕಲ್ಯಾಣ ಆಗುತ್ತೆತೆ. ಆ ಗುರುರಾಯರ ಆಜ್ಞೆ ನನಗೆ ಹೇಳ್ತಾ ಐತೆ!ತಾ ಹೇಳಿಕಾಕ್ಸ ಈ ಶಾಂತಿ ಗೂಡೆ ತನ್ನ ಎರಡ್ ತಂಗೆಗಳ ಜೊತೆಲಿ ನಿಂತ್‌ಕಂಡ್ ಎದ್‌ರ್ ಬಾಗ್‌ಲ್‌ನ ಜಾಸ್ತಿ ಓಪೆನ್ ಮಾಡಿ ನೋಡಿಕಂಡ್ ನಿಂತತ್. ಇದರಕಂಡ ಶಾಸ್ತ್ರಿಗೆಳಿಗೆ ಬಹಳ ಖುಷಿ ಆಗಿ ಹೋತ್. ಕೂಡ್ಲೆ ಶುರು ಮಾಡ್ತ್ ಇವನ ಬಜನೆನ. ಈ ಮನ್ಯಾಗೆ ಒಳ್ಳೆ ಶುಭ ಲಕ್ಷಣಗಳಿವೆ. ಅಷ್ಟಲಕ್ಷ್ಮಿಗಳೂ ಇಲ್ಲಿ ಸೊಂಟಮುರ್ಕೊಂಡು ಕುಳಿತವರೆ, ಈ ಮನೆ ಯಜಮಾನ್ರಿಗೆ ಶನಿದೆಸೆ ಕಳೆದು ಶುಕ್ರದೆಶೆ ಕೂಡ್ತಾ‌ಇದೆ. ಇನ್ ಎರಡೇ ದಿವಸದಲ್ಲಿ ಈ ಮನೆಲಿ ಒಂದು ಶುಭ ಕಲ್ಯಾಣ ನಡೆದು ಹೋಗುತ್ತೆತೆ. ಹಂಗಂತಾ ನನ್ನ ಹಾಲಕ್ಕಿ ಶಾಸ್ತ್ರ ಹೇಳುತ್ತೆತೆ. ನನ್ನ ಶಾಸ್ತ್ರ ಸುಳ್ಳಾಗೋದಿಲ್ಲಾ. ಆ ರಾಘುವೇಂದ್ರ ಸ್ವಾಮಿ ಆಣೆ ಮಾಡಿ ಹೇಳ್ತಿನಿ. ಇದು ಸುಳ್ಳಾದ್ರೆ ನನ್ನ ಗಡ್ಡ ಮುಡಿನ ಬೋಳ್ಸಿಕಂಡ್ ಬಿಡ್ತಿನಿ. ಬನ್ರಮ್ಮಾ ಶಾಸ್ತ್ರಕೇಳಿ ತ್ತಾ ಹೇಳ್‌ತಾ ನಿಂತ್‌ಕಂಡತ್. ಈ ಗೂಡೆಗಳಿಗೆ ಈ ಶಾಸ್ತ್ರ ಹೇಳುವವನ ಒಳಗೆಕರ್ದ್ ಶಾಸ್ತ್ರಕೇಳಿಕೆ ಹೆದ್ರಿಕೆ ಯಾಕೆತ್ತೇಳ್ರೆ ಮನೆಲಿ ಅಮ್ಮ, ಅಪ್ಪ ದೊಡ್ಡವು ಯಾರೂ ಇಲ್ಲೆ. ಎಲ್ಲಾ ಹೊಲಗದ್ದೆಕಡೆ ಆಳುಗಳ ಕರ್ಕಂಡ ಹೋಗಿಬುಟ್ಟೋಳು. ಇದರ ಅರ್ಥ ಮಾಡಿಕಂಡ ಈ ಶಾಸ್ತ್ರಿಜೀ ಭಯಪಡ ಬೇಡ್ರಮ್ಮಾ ಒಂದ್ ಮಂದಲಿಗೆ ತಂದ್ ಇಲ್ಲೆ ಹಾಸಿಕೊಡಿ. ನಿಮ್ಮ ಭವಿಷ್ಯದ ಲಕ್ಷಣ ಒಳ್ಳೆದ್ಯೆತೆ. ಅದನ್ನ ಮಾತ್ರ ನಾನೆ ಹೇಳಿ ಹೋಗಬೇಕೆಂದು ನನ್ನ ಸ್ವಾಮಿ ಗುರುರಾಘುವೇಂದ್ರರ ಆಜ್ಞೆ ಆಗ್ಯೆತೆ ತಾ ಹೇಳಿಕಾಕನ ಶಾಂತಿ ಗೂಡೆಗೆ ಒಂದ್ ತರಹ ಕುತೂಹಲ ಶುರುಆತ್. ಹೋಗ್ರೇ ಮಂದ್ಲಿಗೆ ತಂದ್ ಇಲ್ಲೇ ಹೊರಗಡೆ ಹಾಕಿತ್ತೇಳ್ತ್ ಬೇಡಮ್ಮಾ ತಾಯೀ ಕೆಲವು ಗುಪ್ತ ಸಮಾಚಾರಗಳಿವೆ. ಅದನ್ನ ನಿನಗೆ ಮಾತ್ರ ಹೇಳಬೇಕು. ನಿನ್ನ ತಂಗಿಯಂದಿರಿಗೆ ಇದು ಸಮ್ಮಂದ ಪಡ್ಡ್‌ಲ್ಲೇ ಒಳಗಡೆ ಹಾಚಾರಲೇ ಹಾಕಿರೆ ಸಾಕ್‌ತ್ತೇಳಿಕಾಕನ ಅವು ತಂದ ಮಾಂದ್ರಿನ ಒಳಗಡೆ ಹಚಾರಲಿ ಹಾಸಿದೊ. ಸಾಸ್ತ್ರಿ ತನ್ನ ಕೊಲ್ಹಾಪುರದ ದಪ್ಪ ಚಪ್ಪಲಿನ ಹೊರಗಡೆ ಬುಟ್ಟ್ ಒಳಗಡೆಗೆ ಹೋತ್. ತನ್ನ ಜೋಳಿಗೆ ಕಟ್ಟ್‌ನ ಒಂದ್ ಸೈಡಿಗೆ ಮೊಡಗಿ ಕುದ್ದತ್. ಆ ರಾಘುವೇಂದ್ರಸ್ವಾಮಿಯ ಮಂತ್ರನ ಪಠಣ ಮಾಡಿಕಂಡ ಜೋಳಿಗೆ ಒಳಗಿಂದ ಕವಡೆಗಳನ್ನ ಮುಷ್ಠಿ ಒಳಗೆ ಹಿಡ್‌ಕಂಡ್, ಬಾಮ್ಮತಾಯಿ ನನ್ನ ಎದುರುಗಡೆ ಕುದ್ದ್ ಕಾತ್ತೇಳಿ ಮುಖನೋಡಿ, ನೋಡುಮಗಳೇ ನೀನು 20ದಿನದ ಹಿಂದೆ ಗಂಗೆಪಾಲಾಗಲು ಪ್ರಯತ್ನಪಟ್ಟಿದ್ದೆ ಅಲ್ವಾ? ಸುಳ್ಳು ಹೇಳಬ್ಯಾಡ. ಏನಮ್ಮಾ ತಂಗಮ್ಮಂದಿರೆ ನಾನು ಹೇಳಿದ್ದು ನಿಜತಾನೆ? ಹೌದು ಸ್ವಾಮಿ, ಮೂರುಜನ ಅಕ್ಕ ತಂಗಿಗ ಒಟ್ಟಿಗೆ ಹೇಳ್ದೋ. ಹಾಂ ಅದಕ್ಕೆ ಮತ್ತೆ ಈ ಕಂಠಕ ಪರಿಹಾರ ಮಾಡಲಿಕ್ಕೋಸ್ಕರನೇ ನನ್ನನ್ನು ಆ ಪ್ರಭು ಕಳ್ಸಿಕೊಟ್ಟಿದ್ದಾರೆ. ಆ ದುಷ್ಟ ಶಕ್ತಿನ ನಾನು ಹಿಡ್ದ್ ಈ ಬಾಟ್ಲಿ ಒಳಗೆ ಕೂಡಿ ಹಾಕಿ ಆ ದುಷ್ಟ ಪೀಡೆ ಬಾಧೆನ ನಿಗ್ರಹಿಸಿನೆ. ಹೋಗು ತಂಗವ್ವಾ ನೀನು ಒಂದ್ ಚೊಂಬುಲಿ ಹೊಸ ನೀರ್‌ನ ಹಿಡ್ಕಂಡ್ ಬಾ, ಅವ್ವಾ ಚಿಕ್ಕತಂಗಿ ನೀನು ಅಂಗಡಿಗೆ ಹೋಗಿ ಎರಡ್ ಬಾಳೆಹಣ್ಣ್ ಕುಂಕುಮ, ಕರ್ಪೂರ ತಕ್ಕೊಂಡ್ ಬಾ. ಅಷ್ಟೇ ಸಾಕ್ ಆ ಮೇಲೆ ನೀವು ಹಂಗೆ ನೋಡಿಕಣಿ ನಾನ್ ಆ ಕೆಟ್ಟ ಪೀಡೆನ ಹೆಂಗೆ ಹಿಡ್ದ್ ಕಟ್ಟಿಹಾಕಿನೆತಾ? ತ್ತೇಳಿ ಆ ಗೂಡೆಗಳ ಕೈಗೆ ಕಾಸ್ ಕೊಟ್ಟ್ ಹೊರಗೆ ಕಳ್ಸಿತ್. ಚಿಕ್ಕವಳು ತಂದ ಕುಂಕುಮ ಕರ್ಪೂರನ ತಕಂಡ್ ಹೋಗಿ ಒಂದ್ ತೆಂಗಿನಕಾಯಿ ಎತ್‌ಕಂಡ್ ಬಾ ತ್ತೇಳಿ ಪುನಃ ಹೊರಗಡೆಗೆ ಕಳ್ಸಿ. ಕುಂಕುಮಲಿ ಶ್ರೀ ಚಕ್ರನ ಬುಡ್ಸಿಕಂಡ್ ಮಂತ್ರ ಹೇಳಿಕೆ ಸುರುಮಾಡ್ತ್. ಸಣ್ಣಗೂಡೆ ಚೊಂಬುಲಿ ಹೊಸನೀರ್‌ನ ತಂದ್ ಮಡಗಿತ್. ನೋಡ್ರಮ್ಮಾ ಈವಾಗ ನೀವಿಬ್ಬರೂ ಇಲ್ಲೇ ಹೊರಗಡೆ ಕುಳಿತಿರಿ, ನಾನು ಈ ಶ್ರೀ ಚಕ್ರ ಬರ್ದ್ ಕಳಸ ಕಟ್ಟಿ ಪೂಜೆ ಮಾಡಿ ಒಂದು ಯಂತ್ರ ಬರ್ದ್ ಆದ ಮೇಲೆ ನಿಮ್ಮಿಬ್ಬರ ಒಳಗೆ ಕರ್ದನೆ. ಅಷ್ಟೊತ್ ಮುಟ್ಟ ನೀನ್ ಇಲ್ಲೇ ಪಕ್ಕದ ಹಾಲ್‌ನಲ್ಲಿ ಕುದ್‌ಕಣಿತ್ತೇಳಿ ಪುನಃ ಜೋರಾಗಿ ಮಂತ್ರಪಠಣಕ್ಕೆ ಸುರುಮಾಡ್ತ್. ಆ ಗೂಡೆಗಳಿಗೆ ಈ ಸಾಸ್ತ್ರಿಗಳ ಮೇಲೆ ವಿಶ್ವಾಸ ಬಂದ್ ಬುಟ್ಟಿತ್. ಯಾಕೆತ್ತೇಳಿರೆ, ಅಕ್ಕ ಸರಿಯಾಗಿ 20ದಿನದ ಹಿಂದೆ ಹೊಳೆ ನೀರ್‌ಗೆ ಹಾರಿ ಬಿದ್ದ ವಿಚಾರನ ಸರಿಯಾಗೇ ಹೇಳಿತಲ್ಲಾ?ಆದುದರಿಂದ ಇಂವ ದೊಡ್ಡ ಜ್ಞಾನಿ ಆಗಿರ್ದುತ್ತೇಳಿ ಗ್ಯಾನಮಾಡಿ ಇಬ್ಬರೂ ಹೊರಗಡೆ ಬಂದ್ ಕುದ್‌ಕಂಡೊ. ಈ ಸಾಸ್ತ್ರಿ ಈ ಶಾಂತಿ ಗೂಡೆನ ಹಕ್ಕಲೆ ಕೂರ್ಸಿಕಂಡ್ ಕಣ್ಣ್‌ಮುಚ್ಚಿ ಮಂತ್ರಪಠಣ ಮಾಡುತಾ ಅವಳ ತಲೆಮೇಲೆ ತನ್ನ ಅಂಗೈಲಿ ಸವರಿಕಂಡ್ ಶಾಂತಿ, ನನ್ನ ಪ್ರೀತಿಯ

**ಕಳ್ದ ಸಂಚಿಕೆಂದ ......**

Mr. ರಾಜು ತನ್ನ ಕನಸ್‌ನ ರಾಣಿ, ತಾನು ಮದ್ವೆ ಆನೆ ತಾ ಬಾಪೆಕೊಟ್ಟ್ ಬಂದ ಆ ಕುಂಟಿ ಶಾಂತಿ ಗೂಡೆನ ಅರ್ಜೆಂಟಾಗಿ ನೋಡಿ ಮಾತಾಡಿಕೆ ಆಸೆ ಆಗಿ ಹೋಗಿತ್. ಹಂಗಾಗಿ ಆ ಶಾಂತಿ ಗೂಡೆ ಇರುವ ಊರ್‌ರೊಳಗೆ ಅವಳ ಮನೆ ಹುಡುಕಿ ಹಿಡಿಯಕೋಸ್ಕರ ಕೈ ಶಾಸ್ತ್ರ ಹೇಳುವ ಶಾಸ್ತ್ರಿನ ವೇಷನ ಹಾಕಂಡ್ ಅಲ್ಲೇ ಮನೆ ಮನೆಗಳಲ್ಲಿ ಶಾಸ್ತ್ರ ಹೇಳುತಾ ಹೋಗುತುಟ್ಟು......

ಮುಂದಕೆ ........

ಒಂದೇ ತಿಂಗಳು ಸುಖವಾಗಿರಬೇಕಾದರೆ ಮದುವೆಯಾಗು, ಜೀವನ ಪೂರ್ತಿ ಸುಖವಾಗಿರಬೇಕಾದರೆ ಸನ್ಯಾಸಿಯಾಗು. — ಟಾಲ್‌ಸ್ಟಾಯ್.

ಶಾಂತಿ ನಾನ್ ಯಾರ್‌ತ್ತೇಳಿ ನಿಂಗೆ ಗೊತ್ತಾತಿಲ್ಯಾ? ತಾ ಹೇಳಿ ಈ ಶಾಸ್ತ್ರಿ ತನ್ನ ತಲೆಯ ಟೋಫನ್‌ನ ತೆಕ್ತ್. ಗಡ್ಡಮೀಸೆಗಳನ್ನ ಮೆಲ್ಲಂಗೆ ಕಿತ್‌ಹಾಕಿತ್. ಕನ್ನಡಕನ ತೆಗ್ದ್ ಈಗ ನೋಡುಶಾಂತಿತಾ ಅವಳ ಗಲ್ಲನ ಹಿಡ್ದ್ ಮುಖನ ತೋರ್‍ಸಿತ್. ಆ ಶಾಂತಿಗೆ ಒಮ್ಮೆಗೆ ಭಯ, ಆಶ್ಚರ್ಯ, ಸಂತೋಷ, ಹಿಂಗೆ ಎನೆಲ್ಲೋ ಒಟ್ಟಿಗೆ ಆಗಿಹೋತ್. ಅವಳು ಕಣ್ಣ್‌ನ ಅರಳಿಸಿ, ಭಯ ಬಿದ್ದಕೂಸು ಅವ್ವನ ತಬ್ಬಿಕಂಡಂಗೆ ಒಂದೇ ಸರ್ತಿಗೆ ನನ್ನ ರಾಜಾತಾ ಹೇಳಿ ತನ್ನ ಮುಖನ ಅವನ ಎದೆ ಒಳಗೆ ಹುಗ್ಗಿಸಿ ಬುಡ್ತ್.

ಅವಳ ಗಲ್ಲ ಹಿಡ್ಕಂಡ್, ಶಾಂತಿ, ನಂಗೆ ನೆನ್ನೆರಾತ್ರಿ ಕೆಟ್ಟ ಕನ್ಸ್ ಬಿದ್ದಿತ್. ಹಂಗಾಗಿ ನಾನ್ ನಿನ್ನ ನೋಡಿಕೆ ನಿನ್ನ ಹುಡುಕಿ ಹಿಡಿಯಕೋಸ್ಕರ ಈ ತರದ ವೇಷನ ಹಾಕಂಡ್ ಬಾಕ್ಆತ್. ಈಗ ನಂಗೆ ತುಂಬಾ ಸಮಧಾನ ಆಗಿ ಹೋತ್. ಈಗ ನಮ್ಮಿಬ್ಬರ ಮದ್ಯೆ ನಿಶ್ಚಿತಾರ್ಥನ ಮಾಡಿಕಂಬ ಅವಕಾಸ ಸಿಕ್ತ್. ನನ್ನ ಶಾಂತಿ, ನನ್ನ ಚಿನ್ನ ಈಗ ನನ್ನ ಕೈ ಒಳಗೆ ಉಟ್ಟು ತಾ ಹೇಳಿ ಅವಳ ಗಲ್ಲನ ಗಟ್ಟಿಯಾಗಿ ಒತ್ತಿಹಿಡ್ದ್ ತನ್ನ ಎದೆಒಳಗೆ ಅಡಂಗಿಸಿಕಂಡತ್. ಅವಳು ಕೂಡಾ ಎಲ್ಲಾ ಪ್ರಪಂಚನ ಮರ್‍ತ್‌ಹೋಗಿ ಸಮಾಧಾನಲಿ ನಿಟ್ಟುಸಿರು ಬುಟ್ಟು ರಾಜೂ, ನನ್ನ ರಾಜ ತ್ತೇಳಿಕಂಡ್ ಅಂವನ ಸೊಂಟನ ಹಂಗೇ ಬಳಸಿ ಹಿಡ್‌ಕಂಡ್ ಬುಡ್ತ್. ಆಗ Mr. ರಾಜುಗೆ ಎಲ್ಲಿಲ್ಲದ ಹುಮ್ಮಸ್ ಬಂದ್ ಬುಡ್ತ್. ಅವಳ ಮುಖನ ಹಿಡ್ಕಂಡ್ ಒಳ್ಳೆ ಹುಚ್ಚು ಹಿಡ್ದವರಂಗೆ ಹಣೆಗೆ, ಕಣ್ಣಿಗೆ, ಕೆನ್ನೆಗೆ, ತುಟಿಗೆ ಹಿಂಗೆ ಸಿಕ್ಕಿದ ಕಡೆಗೆಲ್ಲಾ ಲೊಚಲೋಚನೆ ಕಿಸ್ ಹೊಡಿಯತಿತ್ತ್. ಆಗ ಇವಳೇನು ಹಿಂದೆ ಬೀಳ್ತೆ ಅವನ ಮುಖಕೆ ಒಳ್ಳೆ ನಾಯಿಮರಿ ನೆಕ್ಕಿದಂಗೆ ಅಂವನ ಮುಖ ಪೂರ್ತ ಒಂದುಚೂರು ಜಾಗ ಬುಡದೆ ಮನಸ್ಸಿಗೆ ಸಮಾಧಾನ ಆಗುವಷ್ಟ್ ಕಿಸ್‌ಗಳ ಕೊಡ್ತ್. ಹಿಂಗೇ ಇಬ್ಬರೂ ಅಡಿಕಾಕನ ಇವರ ಮೈಲಿ ಒಂತರಾ ಕಾವು ಏರಿಕೆ ಶುರ್ ಆತ್‌ಕಂಡದೆ ಒಬ್ಬರ್‌ನೊಬ್ಬ ತುಟಿಗಳ ಕಚ್ಚಿ ಹಿಡ್‌ಕಂಡವು ಬೇಸಿಗೆ ಕಾಲಲಿ ನಾಗರಹಾವುಗ "ಏಣಿ" ಆಡ್ದಂಗೆ ಹಿಡ್ಕಂಡ್ ತಬ್ಬಾಡಿಕಂಡ್ ಬುಸ್‌ಗುಟ್ಟಿಕಂಡ್ ಸ್ವಲ್ಪಹೊತ್ ಹಂಗೆ ಇದ್ದೊ. ಇಬ್ಬರಿಗೂ ಸ್ವಲ್ಪ ಸಮಾಧಾನ ಆದಂಗೆ ಆತ್. ನೋಡ್ ಶಾಂತಿ ನಾನ್ ಅಂದ್ ನಿನ್ನ ನೀರ್‌ಂದ್ ಬಾಚಾವ್ ಮಾಡ್ದ ಮೇಲೆ, ನಿನ್ನ ನಾನ್ ಮದುವೆ ಆನೆತ್ತೇಳಿ ಪ್ರಾಮಿಷ್‌ಮಾಡಿ ಹೊರಟ್ ಬುಟ್ಟೆ. ಆದ್ರೇ ನಾನ್ ನಿನ್ನ ಪರಿಚಯ ಮಾಡಿಕಂಡತಿಲ್ಲೆ. ಈಗ ಕೇಳ್, ಇದೇ ತಿಂಗ ತಾ. 25ಕ್ಕೆ ಗುರುವಾರ ದಿನ ನೀನ್ ನನ್ನ ಮನೆಗೆ ಹೆಂಗಾದ್ರೂ ಮಾಡಿ ಬಂದ್ ತಲಪಿ ಬುಡಕ್ಕು ನನ್ನ ಮನೇಲಿ ನಿಂದು ನಂದೂ ಮದ್ವೆ. ನೀನ್ ನಿಮ್ಮ ಮನೇಲಿ ಈ ವಿಚಾರನ ಯಾರಿಗೂ ಹೇಳುದು ಬೇಡ.

ಒಂದ್ ಎರಡ್ ದಿನ ನಿಮ್ಮ ಮನೆಯವುಕೆ ಗಾಭರಿ ಇದ್ದದೆ ಅಷ್ಟೆ. ಆಮೇಲೆ ನಾನೇ ನಿಮ್ಮ ಮನೆಯವುಕೆ ಈ ವಿಚಾರ ತಿಳ್ಸಿ ನಂತರ ನಾವಿಬ್ಬರೂ ನಿಮ್ಮ ಮನೆಗೆ ಒಟ್ಟಿಗೆ ಬಂದರಾತ್. ತಾ.25 ಕ್ಕೆ ನನ್ನ ತಂಗೆನ ಮೊದುವೆ ಉಟ್ಟು, ಆದ್ರೇ ನಾನ್ ಇಲ್ಲಿ ಕೆಲವು ಘನಾಂದಾರಿ ಕೆಲ್ಸನ ಇಲ್ಲಿ ಮಾಡಿದುದರಿಂದ ನನ್ನ ಮುಖನ ಇಲ್ಲಿಯಾರಿಗೂ ತೊರುವಂಗೇ ಇಲ್ಲೆ. ಅಥವಾ ಊರ್‌ಲಿ ಕೂಡಾ ನನ್ನ ಗುರ್ತ್ ಹಿಡಿಯದಂಗೆ ನಾನ್ ಇರೋಕು ಆದುದರಿಂದ ನೀನ್ ಯಾಕೆ? ಎಂತದ್ ತಾ ಈಗ ಕೇಳ್‌ಬ್ಯಾಡ. ನನ್ನ ತಂಗೆನ ದಾರೆವೆರ್‍ದ್ ಕೊಡುವ ಆ ಶುಭಮೂರ್ತಲೇ ನನ್ನ ನಿನ್ನ ಮದುವೆ ಅಲ್ಲಿ ನಡೆದದೆ ಇಂತಹ ಶುಭ ಮೂರ್ತನ ನೀನ್ ತಪ್ಪಿಸಿಕೊಂಬೊದು ಬ್ಯಾಡ ಗೊತ್ತಾತಾ? ತಾ ಕೇಳ್ತ್ ಆಯ್ತು. ನನ್ನ ರಾಜ. ನೀವುತಾನೆ ನನ್ನ ಪ್ರಾಣ ಉಳ್ಸಿದವು ಇನ್ ನೀವು ತಾನೇ ನನ್ನ ಬಾಳಿಗೆ ಆಧಾರ ಆಗಿರುದು. ಖಂಡಿತ ನಾನ್ ಹೆಂಗಾರ್ ಮಾಡಿ ಆ ದಿನ ಬೆಳಗಿನ ಜಾವಕೆ ಹೊರಟ್ ಬಂದ್ ಆ ಸಮಯದ ಒಳಗೆ ನಿಮ್ಮ ಮನೆಗೆ ಬಂದಿದ್ದೇವೆ ತ್ತೇಳಿ ಅವನ ಕೈನ ಗಟ್ಟಿಯಾಗಿ ಹಿಡ್‌ಕಂಡತ್.

ನೋಡ್ ಶಾಂತಿ ನನ್ನ ಮನೆ. ಮಡಿಕೇರಿಂದ 4ಕಿ.ಮೀ. ದೂರ ಭಾಗಮಂಡಲ ರಸ್ತೆ ಬೆಟ್ಟದಕೆಳಗೆ ತಾಳೋತ್‌ಮಾನಿ ತ ಉಟ್ಟು ಅಲ್ಲಿಗೆ ಬಸ್‌ಲಿ ಬಂದ್ ಇಳ್ದರೆ ಅದೇ ಬಸ್ ಸ್ಟಾಪ್ ಎದುರುಗಡೆನೇ ಇರುವ ಕೆಳಮನೆ ಬೋಪಜ್ಜನವರ ಮನೆ, ಅವರ ಒಬ್ಬನೆ ಒಬ್ಬ ಮಗ ನಾನು ನಂಗೆ ಮೋಸ ಮಾಡದೆ ಬರೋಕು. ಗೊತ್ತಾತಾ? ಹಾಂ! ಪ್ರಾಮಿಷ್ ಮಾಡ್ ಹಾಂ ಹಂಗೆ ನೀನ್ ನನ್ನ ರಾಣಿ ಧೈರ್ಯವಂತೆ ನನ್ನ ಲೈಫ್ ಪಾರ್ಟ್‌ನರ್ ತ್ತೇಳಿ ಅವಳ ಕೈಮೇಲೆ ಕೈ ಹಾಕಿ ಭಾಷೆ ತಕಂಬಕನ ಹೇಳ್ತ್. ಹಾಂ ಶಾಂತಿ ನನ್ನ ಪೂಜೆ, ಮಂತ್ರ ಎಲ್ಲಾ ಮುಗಿಯುತ್ತಾ ಬಂದುಟ್ಟು ನಾನ್ ಹೊರಡಿಕೆ ಮೊದ್ಲ್ ದಕ್ಷಿಣೆ ಕೊಡ್‌ತ್ತೇಳಿ ಪುನಃ ತನ್ನ ದವುಡೆನ ಅವಳ ಬಾಯಿಹತ್ರ ಹಿಡ್ತ್. ಆಗ ಅವಳ ತುಟಿ ಕಬ್ಬಿಣಕ್ಕೆ ಮ್ಯಾಗ್ನಟ್ ಹಿಡ್ದಂಗೆ ಅವನ ಕೆಳತುಟಿನ ಕಚ್ಚಿ ಹಿಡ್ಕಂಡ್ ಬುಟ್ಟವಳು ಬುಟ್ಟದೇತ್ತಾ ? ಅವನ ನಯವಾದ ಕೆನ್ನೆನ ಬುಟ್ಟ್ ಅವನ ಕೆಳತುಟಿನ ಕಚ್ಚಿ ಹಿಡ್ಕಂಡ್ ಅಲ್ಲಿಂದ್ಲೇ ರಸ ಹೀರಿ ಹೀರಿ ಗುಡ್ಕರಿಸ್‌ತಿತ್ತ್. ಇಂವ ಪೆದ್ದನಂಗೆ ಕಣ್‌ಮುಚ್ಚಿ ಅವಳಿಗೆ ತುಟಿನ ಕೊಟ್‌ಕಂಡ್ ಕುದ್ದಿತ್. ಹಂಗೆ ಇಬ್ರಿಗೂ ಮೈ ಬೆಚ್ಚಂಗೆ ಆಗ್‌ತಿತ್ ಕಂಡದೇ ! ಇದೇನ್ ಇಷ್ಟೊತ್ತಾದರೂ ಇಬ್ರೂದೂ ಏನ್ ಸದ್ದೇ ಇಲೆಲ್ಲಾ ತ್ತೇಳಿ ತಂಗೆಗಳಿಗೆ ಅನುಮಾನ ಬಂದ್ ಬಾಗ್ಲ್‌ಲಿ ಇಬ್ಬರೂ ಇಣಕಿ ನೋಡ್ದೊ. ಅವು ಗಾಭರಿಂದ ಅಕ್ಕಾ ತ್ತೇಳಿ ಜೋರಾಗಿ ಕಿರುಚಿಕಂಡ್ ಬುಟ್ಯೋ. ಆಗ ಈ ಸಾಸ್ತ್ರಿ ಅವಳ ಕೆನ್ನೆ ಹಿಡ್ದ್ ತಳ್ಳಿಕಾಕನೇ ಶಾಂತಿಗೆ ಈ ಸುಖಾನುಭವದ ಭಂಗ ಆಗಿ ಪ್ರಜ್ಞೆ ಬಂದ್ ತಡಬಡಾಯಿಸಿಕಂಡ್ ಎದ್ದ್ ಹೊರಕ್ಕೆ ಓಡ್ ಬಂದ್ ತಂಗೆಗಳೊಂದಿಗೆ ಸೇರಿಕಂಡ್ ಬುಟತ್.

ಇದೆನಕ್ಕಾ ನಿನ್ನ ಆಟ ? ಆ ಸಾಸ್ತ್ರಿ ಕೆನ್ನೆನ ನೀನೇ ಹಂಗೆ ಕಚ್ಚಿಹಿಡ್ದಿದಲ್ಲಾ ನಿಂಗೆ ಏನಾದ್ರು ದೆವ್ವ ಬಡಿದಿತ್ತಾ? ಈಗ ಅವನ ನೋಡಿದ್ರೆ ಶಾಸ್ತ್ರಿತರನೇ ಕಾಣುತಿಲ್ವಲ್ಲಾ. ಒಳ್ಳೆ ಫಿಲ್ಮ ಹೀರೋ ಶಶಿಕುಮಾರ್‌ತರ ಕಾಣ್ತಿದ್ದಾನೆ. ಏನ್ ಸಮಾಚಾರ? ಅಂತ ಪ್ರಶ್ನೆಗಳ ಸುರಿಮಳೆಗೆ ಬಾಯಿ ತೆಗೆಯಕಾಕನ ಇವ್ಳುಉಷ್ ಸದ್ದ್‌ಮಾಡ್‌ಬ್ಯಾಡಿತ್ತೇಳಿ. ಅವ್ರೇ ಕಾಣ್ರೋ ನಿಮ್ಮ ಬಾವಂದಿರು

ಮನಸ್ಸೊಂದು ನೆಮ್ಮದಿಯಿಂದಿದ್ದು ಬಿಟ್ಟರೆ ತೀರ್ಥಯಾತ್ರೆಯ ಅವಶ್ಯಕತೆ ಇಲ್ಲ. — ಸುಭಾಷಿತ.

20 ನೇ ಪುಟಕ್ಕೆ

# ಉದ್ಯೋಗ ಸಿಕ್ತ್

ದಿನ ಬೆಳಗಾದರೆ ಸಾಕ್, ದುಡ್ಡ್ ದುಡ್ಡ್‌ತ್ತಾ ಇದೇ ರಾಮಾಯಣ ಆಗೋತ್. ಹತ್ತ್ ಪೈಸೆ ಉಳಿಸಿಕೆ ಬುಡುದಿಲ್ಲೆ ಈ ಮಕ್ಕಳಿಂದ ನಂಗತ್ತ್ ಸಾಕ್ ಸಾಕ್‌ದೇ, ಆ ದೇವರೇ ನಮ್ಮನ್ನ ಕಾಪಾಡಕ್, ತ್ತಾ ಮುಖ ಗಡಿಗೆ ಧಪ್ಪ ಮಾಡಿಕಂಡ್ ಕರ್ಫ್ಯೂವಿಧಿಸಿದಂಗೆ ಯಾರೊಂದಿಗೆ ಮಾತಾನಾಡದೆ ನ್ನನ್ನ ಹಣೆಬರಹತ್ತಾ ಹೇಳಿಕಂಡ್ ಅವ್ವಾ ಬಯ್ಯಕಂಡ್ ಕೆಲಸ ಮಾಡ್‌ತಿತ್.

"ಸತೀಶ", ನಾನ್ ಏನ್ ಮಾಡುದ್ ಈಗ ನಂಗೆ ದುಡ್ಡ್ ಬೇಕಾಗಿತ್ತ್ ಹೇಂಗೆ ಕೇಳೂದ್‌ತ್ತಾ ಗೊತ್ತಾದುಲ್ಲೆ, ಸತೀಸನ ಪರದಾಟ, "ಅಪ್ಪಂತೂ ಕೊಡ್‌ದುಲ್ಲೆ ಏನ್ ಮಾಡ್‌ದ್ ಈಗ, ಪರದಾಟವೇ ಪರದಾಟ. ಡಿಗ್ರಿಮಾಡಿ ಎರಡು ವರ್ಷ ಕಳ್‌ದರು ಸತೀಶಂಗೆ ಎಲ್ಲಿಕೂಡ ಕೆಲಸ ಸಿಕ್ಕಿತ್ತ್‌ಲ್ಲೆ. ಸಿಕ್ಕಾಸಿಕ್ಕಾ ಕಡೆ ಅರ್ಜಿ ಹಾಕಿದ್ದೇ ಹಾಕಿದ್ ಡಿಗ್ರಿ ಸರ್ಟಿಫಿಕೇಟ್ ಹಿಡಕಂಡ್ ದೊಡ್ಡವುಕೆ ನಮಸ್ಕಾರ ಹಾಕಿ, ಹಾಕಿ, ಕೈ ಬೇನೆ ಆಗೋತ್ ಹೊರತ್ ಕೆಲಸ ಮಾತ್ರ ಯಾರ್ ಕೊಟ್ಟಂಗಿಲ್ಲೆ. ಲಂಚಕೊಟ್ಟರೂ ಕೆಲಸ ಸಿಕ್ಕುವ ಹಾಗಿಲ್ಲೆ. ಅಂತಹ ಪರಿಸ್ಥಿತಿ ಯಾಗಿರ್‌ಕನ, ಅಪ್ಪ ಅವ್ವಂಗಂತೂ ಎರಡು ಗೂಡೆಗ ಒಳ ಅವುಕ್ಕೆ ಮದುವೆ ವಯಸ್ಸು ಬಂದರು ಯಾವ ರೀತಿಲಿ ಮದುವೆ ಮಾಡೋದ್‌ತ್ತಾ ಗ್ಯಾನ ಮಾಡಿರೇ ತಲೆ ಚಿಟ್ಟ್‌ಹಿಡ್‌ದದೇ. ಪರಿಸ್ಥಿತಿ ನಮ್ಮನ್ನ ಆ ರೀತಿ ಇಟ್ಟುಟ್ಟು. ಎಲ್ಲಾ ನನ್ನ ಹಣೆ ಬರಹ ಹೆಣ್ಣಾಗಿ ಹುಟ್ಟಿಕಾಗದ್‌ಪ್ಪ ಅದರಲ್ಲಿ ಹೆಣ್ಣ್ ಮಕ್ಕ ಹುಟ್ಟಿಕಾಗದ್‌ತ್ತಾ ಹೇಳಿಕಂಡ್ ಅವ್ವಾ ಬೇಸರಲ್ಲಿ ಇತ್ತ್ ಎಲ್ಲಾ ದೇವರ್ ಕಂಡಂಗೆ ಆದೇ ಏನು ಮಾಡುದ್.

ಯಾವ ಯೋಚನೆ ಇಲ್ಲದ ಸತೀಶಂಗೆ ಅವನ ಸ್ನೇಹಿತರ್ ಬಂದ್ 'ಸತೀಶ, ಸತೀಶ, ಲೋ ಸತೀಶ," ನಿನ್ನ ಎಷ್ಟು ಸಲ ಕರೆಯುವುದು. ಬಾರೋ ಬೇಗ. 'ಓಹೋ ನೀವಾ" ಬನ್ನಿ ಒಳಗೆ ಸತೀಶ ಒಳಗೆ ಕರೆಯಲು, "ನಮಗೆ ಒಳಗೆ ಕುಳಿತು ಕೊಳ್ಳುವಷ್ಟು ಪುರಪೊತ್ತ್ ಇಲ್ಲ ಕಣೋ" ನೀ ಈಗಲೇ ಹೊರಡು ನಾನು ಆ ಮೇಲೆ ಹೇಳ್ತಿನಿ" ಎಂದು ಸತೀಶನನ್ನು ಮನೆಯಿಂದ ಸ್ನೇಹಿತರು ಹೊರಕ್ಕೆ ಕರೆತಂದರು. "ಏನೋ ವಿಶೇಷ" " ಏನಿಲ್ಲ ಇವತ್ತು ಉಪೇಂದ್ರ film release ಆಗಿದೆ ಕಣೋ ಅದಕ್ಕೆ ನಾವೆಲ್ಲಾ ಒಟ್ಟಿಗೆ filmಗೆ ಹೋಗೋಣಾಂತ Deside ಮಾಡಿದ್ದೀವಿ. ನೀ ಏನು ಹೇಳುತ್ತಿಯಾ? "ಸತೀಶ" ನೀವು ಹೋಗಿ ನಾನು ಆಮೇಲೆ ಬಂದು ಕಾಣುತ್ತೀನಿ ಎಂದು friendsರನ್ನು ಕಳುಹಿಸಿಕೊಟ್ಟನು.

ಸತೀಶಂಗೆ ಹೇಂಗಾರ್ ಅಪ್ಪನ ಹತ್ತಿರ ಹಣ ಕೇಳಕ್‌ತ್ತ ಮನೆ ಒಳಗೆ ಅತ್ತಾಂದ ಇತ್ತಾ, ಇತ್ತಾಂಧ ಅತ್ತಾ, ಓಡಾಡಿಕಂಡ್ ಇರ್‌ಕನ ಅಷ್ಟೊತ್ತಿಗೆ ಅಪ್ಪ ಬಂದೋ, ಅಪ್ಪಾ ಅಷ್ಟೊತ್ತಿಗೆ ಅಲ್ಲಾ ಸತೀಶ ಅಮ್ಮ (ಅವ್ವಂಗೆ) Tapಯಿಂದ ನೀರ್ ಹಿಡಿದ್ ಸಹಾಯ ಮಾಡಿಕ್ಕಾಗದ "ನಂಗೆ ನೀರ್ ಬಂದದ್ ಗೊತ್ತಾತ್ತಿಲ್ಲೆ ಅಪ್ಪಾ," ಸತೀಶ, "ಅಪ್ಪಾ , ಅಪ್ಪಾ ನಂಗೆ ಇಂಟರ್‌ವ್ಯೂ ಒಂದುಟ್ಟು ಸ್ವಲ್ಪ 50ರೂಪಾಯಿ ಬೇಕಾಗಿತ್ತ್," "ನಿನ್ನದ್ ಹಣೆ ಬರಹ ನಂಗೆ ಗೊತ್ತ್‌ಲ್ಲೆ ಎರಡ್ ವರ್ಷಂದ Interview ಗೆ ಹೋಗುತ್ತಾ ಒಳ, ನಿನ್ನಂಗೆ ಅಲ್ಲಾ ಎದುರು ಮನೆ ಕಮಲನ ಮಗನ ನೋಡ್. ಅವಂಗೆ ಅಪ್ಪ ಉಟ್ಟಾ? ಅಥವಾ ಅವ್ವಂಗೆ ಸರಕಾರಿ ಕೆಲಸ ಉಟ್ಟಾ? ಅವಳು ಅಲ್ಲಿ ಇಲ್ಲಿ ಕೆಲಸ ಮುಸುರೆ ತಿಕ್ಕಿ ಎರಡ್ ಮಕ್ಕಳ ಸುನಿ ಮತ್ತೆ ಸುಮನ ಸ್ಕೂಲಿಗೆ ಕಳುಹಿಸಿದೆ. ಸುಮನ್‌ನ ನೋಡ್ ಬೆಳಿಗೆ 5 ಗಂಟೆಗೆ ಎದ್ದ್ 7ಗಂಟೆಗೆ ವರೆಗೆ ಓದಿ, ಆಮೇಲೆ 9-00ಗಂಟೆಗೆ ತನಕ ಮನೆಮನೆಗೆ ಹಾಲ್, ಪೇಪರ್, ಕೊಟ್ಟ್ ಆ ಮೇಲೆ ಸ್ಕೂಲ್‌ಗೆ ಹೋದೆ. ಅವನ ಬುದ್ದಿ ನಿಂಗೆ ಇಲ್ಲೆ, ನಿಂಗೆ ಯಾಗ ಬುದ್ದಿ ಬಂದದ್ದೋ ನಂಗೊಂದು ಗೊತ್ತಾದುಲ್ಲೆ, ನಿಂಗೆ ನಾನ್ ಹಣ ಕೊಡುತ್ತಲೆ ಒಳಾ. ನೀ ಯಾವುದಕ್ಕಾದರೂ Salect ಆಗೋಳ. ನೀನ್ ನಿನ್ನ ಯೋಗ್ಯತೆಗೆ ಒಂದು ರೂಪಾಯಿ ಸಂಪಾದನೆ ಮಾಡಿಕೆ ಆದುಲ್ಲೆ. Interview ತಾ ಒಂದು ಸುಳ್ಳು ಬೇರೆ, ಅಲ್ಲದೆ, ತಿಂಗಳ ಕೊನೆ ಬೇರೆ ನಿಂಗೆ ಇದೆಲ್ಲಾ ಹೇಂಗೆ ಗೊತ್ತಾದ್ದೆ ಹೇಳ್, ನನ್ನ ಹತ್ತಿರ ಮಾತ್ರ ಇಂದ್ ದುಡ್ಡ್ ಇಲ್ಲೆತ್ತ ಹೇಳ್‌ಕಂಡ್ ಜಗಲಿ ಇದ್ದ ಚಪ್ಪಲ್ಲಿ ಮೆಟ್ಟಿಕಂಡ್ ಆಫೀಸ್‌ಗೆ ಹೊರಟ್ ಹೋದೋ.

ಸತೀಶ್ ಇಂಗ್ ತಿಂದ ಮಂಗನ ಹಾಂಗೆ ಸಪ್ಪೆ ಮೋರೆ ಹಾಕಂಡ್ ರೂಮಲ್ಲಿ ಕುದ್ದತ್. ತಂಗೀ ಗೀತ ಓಡಿ ಬಂದ್ ಯಾಕಣ್ಣ ಒಂದು ತರಾ ಒಳಾ?"ಏನಿಲ್ಲಾ ನಂಗೆ ಇಂದ್ Interview ಇತ್ತ್ ಅದಕ್ಕೆ ಹೋಕೆ ಅಪ್ಪನ ಹತ್ರ ಹಣ ಕೇಳ್ದ್‌ದೆ, ಇಲ್ಲೇತ ಹೇಳ್‌ತ್. ಈಗ ಏನು ಮಡೋದ್‌ತ್ತಾ ಗೊತ್ತಾದ್‌ಲ್ಲೆ. " ಗೀತಾ" ಓಹೋ ಅದಾ ವಿಶಯ" ಅವ್ವಾನ ನಾನ್ ಕೇಳಿನೆತ್ತಾ ಹೇಳಿ ಅವ್ವಾನ ಹತ್ರ ಓಡಿ ಬಂದ್ ಅವ್ವಾ , ಅವ್ವಾ, ಅಣ್ಣಂಗೆ ಇಂಟರ್‌ವ್ಯೂ ಬಂದುಟ್ಟು ಅದಕ್ಕೆ ಇಂಟರ್‌ವ್ಯೂಗೆ ಹೋಕೆ ದುಡ್ಡು ಇಲ್ಲೇತ ಬೇಜರಲ್ಲಿ ಉಟ್ಟು ಅವ್ವಾ " ಪಾಪ ಅಣ್ಣ." ಅವ್ವಾ ಅಷ್ಟೊತ್ತಿಗೆ "ನಾನ್ ಎಲ್ಲಿಂದ ಕೊಡ್ಡು".

ಏ ಸತೀಸ ನೀನ್ ಹೇಳುದ್ ಸತ್ಯಾನಾ? " ಹೌದು ಅವ್ವಾ" ನೀನ್ ಹೇಳ್‌ದ್ ಎಷ್ಟು ಸಸೀನೋ, ಎಷ್ಟು ಸುಳ್ಳುನೋ ಆ ದೇವರಿಗೇ ಗೊತ್ತು. ನೊಡಿನೇ ಇರ್‌ತಾ, ಹೇಳಿ, ನಾನ್ ಸಾಸಿವೇ ಡಬ್ಬಿಲ್ಲಿ 50 ರೂಪಾಯಿ ಮಡಗಿದ್ದೆ ಉಟ್ಟೋ ಇಲ್ಲೋ ನೋಡಿನೇ ತ್ತಾ ಹೇಳಿ ಅಡಿಗೆ ಮನೆಗೆ ಹೋತ್ ಅವ್ವಾ,. ಸತೀಸಂಗೆ ಒಂದು ರೀತಿಲ್ಲಿ ಖುಸಿಯಾಗಿ ಅವ್ವಾ ಅಡಿಗೆ ಮನೆಗೆ ಹೋದೋ ತಡ, ತಂಗೀ ಗೀತನ ನೊಣೆ, ಮಾಡಿಕಂಡ್ ಗೀತಾ, ನಾನ್ ಇಂಟರ್‌ವ್ಯೂ ಮುಗಿಸಿ ಬಾಕಾನ ಸ್ವೀಟ್ ತಕಂಡ್ ಬನ್ನೇ, ನೀನ್ ಬೇಜರ ಮಾಡ್‌ಬೇಡ. ಅವ್ವಾ 50 ರೂಪಾಯಿ ಹಿಡ್‌ಕಂಡ್ ಬಾತ್, ಸತೀಸ ಅವ್ವಾನ ಬಾಚಿ ತಬ್ಬಿ ಅವ್ವನ ಇಂದ್ ಎಷ್ಟ್ ಲಾಯಿಕ್ ಕಂಡದೇ ಗೊತ್ತಾ? ಅವ್ವಂಗೆ ಒಂದು ಮುತ್ತು ಕೊಟ್ಟ್ 50 ರೂಪಾಯಿಕಿತ್‌ಕರಡ್ ಕುಣದ್ ಕುಪ್ಪಳಿಸ್‌ತಾ? Dress Change ಮಾಡಿ ಅವ್ವಂಗೆ ಗೀತಂಗೆ, Ta, Ta, ಮಾಡಿ friends ಜೊತೆ ಸತೀಸ ಹೊರಟತ್, filmಗೆ ಹೋಗುವ ವಿಷಯ ಅವ್ವಂಗೆ ಗೀತಂಗೆ ಹೇಂಗೆ ಗೊತ್ತಾಕು ಪಾಪ, ಏನಾದರು ತೊಂದರೆಯಾದರೆ ಗಂಡನ ಹೆಂಗೇ ಕೇಳುದುತ್ತಾ

---

**ಸುಳ್ಳಿನ ಸಂಬಂಧಗಳು ಮರಳಿನ ಮೇಲೆ ಕಟ್ಟಿದ ಮನೆಯಂತೆ**

ಹೇಳಿ ಮನೆ ಖರ್ಚಿಗೆ ಕೊಟ್ಟ ದುಡ್ಡ್‌ನ ಉಳಿಸಿತ್ ಅವ್ವಾ. ಯಾಗೋಳ್ ದೇವರನ್ನ ಬೇಡ್‌ದು ನಮ್ಮ ದ್ರಾರಿದ್ರ್ಯನ್ನ ನಾಶಮಾಡಿ ನಮಗೆ ಕರುಣೆ ನೀಡ್‌ತ್ತಾ ದಿನಾ ದೇವರನ್ನ ಬೇಡಿಕಂಡ್ ತನ್ನ ಜೀವನ್ನ ಮಕ್ಕಳಿಗಾಗಿ ದುಡಿದ್ ಗಂಡನ ಯೋಗ ಕ್ಷೇಮ ನೋಡಿಕಂಡರ್ ಯಾರಿಗೂ ಆಸರೆಯಾಗದೆ ತನ್ನ ಜೀವನ ಸಾಗಿಸುತ್ತಿದ್ದೋ ಆದರೆ ಸತೀಶಂಗೆ ಇದೆಲ್ಲಾ ಹೆಂಗೆ ಅರ್ಥ ಆದು ಹೇಳಿ, ಪಾಪ ಮಣಿಂಗೆ ಈ ದಿನ ಆದರೂ ಇಂಟರ್‌ವ್ಯೂನಲ್ಲಿ ಸಲೇಕ್ಟ್ ಆದರೆ ದೇವರಿಗೆ ತುಪ್ಪದೀಪ ಹಚ್ಚಿನೇತಾ ಹೇಳಿಕಂಡ್ ದೇವರಿಗೆ ಕೈ ಮುಗ್‌ದ್ ಅಡಿಗೆ ಮನೆಯಲ್ಲಿ ಮಣಿಗೆ ಕೆಲಸಕ್ಕೆ ಸಿಕ್ಕಿರೆ ಎರಡ್ ಗೂಡೆಗಳ ಮದುವೆ ಯಾವರೀತಿಲ್ಲಿ ಮಾಡೋದ್, ಸತೀಶಂಗೆ ಶ್ರೀಮಂತ ಮನೆತನದ ಸಂಭಂಧ ನೋಡಿ ಮದುವೆ ಮಾಡೋಕು. ಯಾಕೆತೇಳಿರೆ ಈವರೆಗೆ ನಾನ್ ಪಟ್ಟ ಕಷ್ಟ ಮಕ್ಕಳಿಗೆ ಬರಕ್ಕಾಗಧ್‌ತ್ತಾ ಗ್ಯಾನ ಮಾಡಿಕಂಡ್ ಅಡಿಗೆ ಮನೆಲ್ಲಿ ಕನಸಿನ, ಲೋಕದಲ್ಲಿ ಕನಸ್ ಕಾಣ್‌ತ್ತಿತ್. ಅಷ್ಟೊತ್ತಿಗೆ ಸೀತಾ ಬಂದ್ ಅವ್ವಾ ಅವ್ವಾ ನೀನ್ ಏನ್ ಯೋಚನೆ ಮಾಡ್‌ತ್ತಾ ಒಳಾ? ಇಲ್ಲಿ ನೋಡ್ ಈ ಸಾರ್‌ನ ತಿಂದ್ ನೋಡು ಉಪ್ಪಾಗಿ ಬಾಯಿಗೆ ಹಾಕದಂಗೆ ಮಾಡಿಒಳ. ಅನ್ನ ಅಂತೂ ಬೆಂದ್ ಬೆಂದ್ ಮಡ್ಡೆಯಾಗುಟ್ಟು. ಇಂದ್ ಅಂತು ಅಪ್ಪನ ಕೈಯಿಂದ ಬೈಗಳ ಗ್ಯಾರಂಟಿ ತಾ ಹೇಳಿಕಂಡ್ ಸೀತಾ ಅವಳ friend's ಮನೆಗೆ ಹೋತ್, ಸೀತಾ, ಸೀತಾ, ಬಾ ಇಲ್ಲಿ "ಯಾಕೆ ಅವ್ವಾ" ನೀನ್ ಇದನ್ನ ಅನ್ನ ಸಾರ್‌ನ ತೆಗೆದ್‌ಕಂಡ್ ಹೋಗಿ ಪಕ್ಕದ ಮನೆ ಸರಸು ಅವರ ಹಂದಿಗೆ ಹಾಕಿಬುಟ್ಟು ಬಾ. ಇಂದ್ ಅಡಿಗೆ ಸರಿ ಆತ್‌ಲೇ ಅಲ್ಲದೇ ಅಪ್ಪ ಬಂದರೇ ಬಯ್ದದೇ ನೀ ಹೋಗು ಬೇಗಾ, ಹೇಳ್‌ದಷ್ಟು ಮಾಡ್‌ತ್ತಾ ಹೇಳಿ ಸೀತನ ಕೈಯಲ್ಲಿ ಅನ್ನ ಸಾರ್‌ನ ಕಳ್‌ಹಿಸಿತ್. ಸರಸುನ ಹಂದಿಗೆ ಗದ್ದಳವೇ ಗದ್ದಳ. ದಿನಾ ನೀರ್ ಗಂಜಿ ಕುಡಿತಿದ್ದಾ ಹಂದಿಗೆ ಅನ್ನ ಸಾರ್‌ಕಂಡ್ ಲೊಚಲೊಚತ್ತಾ ತಿಂದ್ ಸುಸ್ತಾಗಿ ಹಂದಿ ಬಿದ್ದಿಕಣತ್. ಇನ್ ಅಡಿಗೆ ಮಾಡಿಕೆ ಮನೆಲ್ಲಿ ಅಕ್ಕಿ ಇಲ್ಲೆ ಏನು ಮಾಡುದು. ಅಷ್ಟರಲ್ಲಿ ಎದುರು ಮನೆಯವು ಹಬ್ಬದ ಪಾಯಸ ತಿಂಡಿನ್ನ ಕೊಟ್ಟು ಹೋದೊ. ಅದನ್ನೆ ಮಕ್ಕಳಿಗೆ ಹಂಚಿ ಸುದಾರಿಸಿ ತಾನು ನೀರ್ ಕುಡದು ಇತ್.

ಇಲ್ಲಿ ಸತೀಸ ಅವ್ವನ ಕೈಯಿಂದ 50ರೂಪಾಯಿ ಕೇಳಿಕಂಡ್ friends ಜೊತೆ ಸೇರಿಕಂಡ್ ಸಿನಿಮಾ ಮಂದಿರ ಹತ್ರ ಎಲ್ಲಾ friends ಸೇರಿದೋ. ಸತೀಸನ friends ticketsಗಾಗಿ ಕ್ಯೂನಿಂತೋ. ಮುಂದಿನ ಸಾಲಲೀ ಸತೀಸನ ಅಪ್ಪ ಕ್ಯೂಲ್ಲಿ ನಿಂತದ್ ಕಂಡ್ ಸತೀಸಂಗೆ ಗಾಬರಿಯಾತ್ ಅವಂಗೆ ಒಂದು ಅನುಮಾನ ಬಾತ್ ಮನೆಲ್ಲಿ ದುಡ್ಡ್ ಕೇಳಕನ ದುಡ್ಡ್ ಇಲ್ಲೇತ್ತಾ ಹೇಳತ್ ಈಗ ಇಲ್ಲಿ ನೋಡಿರೆ ಅಪ್ಪಾ ಸಿನಿಮಾ ಟಿಕೇಟ್‌ಗೆ ಕ್ಯೂ ನಿತ್ತುಟ್ಟು ಏನ್ ಇದರ ಗುಟ್ಟುತ್ತಾ ಹೇಳಿಕಂಡ್ ಮೆಲ್ಲೆ ಹೋಗಿ ಅಪ್ಪ ನಿಂತ ಕ್ಯೂ ಹತ್ರ ಹೋಗಿ ನೋಡ್ತ್, ಅಂದರೆ ಅಪ್ಪಾ ಎರಡ್ ಟಿಕೇಟ್ ಹಿಡಕಂಡ್ ಅಲ್ಲಿಂದ ಹೋತ್, ಅಲ್ಲಾ ಅಪ್ಪಾಂಗೆ ಈ ವಯಸ್ಸಿಗೆ ಯಾಕೆ ಈ ಬುದ್ದಿ ಬಾತ್, ಅಸಹ್ಯ ನಂಗತ್ತು ನಂಬಿಕೆ ಅದುಲ್ಲೆ ಇನ್ನೊಂದು ಟಿಕೇಟ್ ಯಾರಿಗೆ ಇರ್ದು ನೋಡನೂ ತಾ ಹೇಳಿಕಂಡ್, ಅಪ್ಪನ ಹಿಂದೆನೇ ಅಪ್ಪಂಗೆ ಕಾಣದಂಗೆ ಹೋತ್. ಅಪ್ಪ ಒಂದು Std., ಬೂತ್‌ನ ಒಳಗೆ ಹೋತ್, ಅಲ್ಲಿ ಮಾತಾಡುದನ್ನ ಆಲಿಸಿತ್ " ಹಲೋ ಹಲೋ ನಾನು ಸಾರ್, ಬಸಪ್ಪ, " ಏನ್ ಬಸಪ್ಪ ಟಿಕೇಟ್ ಸಿಕ್ತಾ, "ಸಿಕ್ತು ಸಾರ್, ಸರ್ ಇಲ್ಲಿ ತುಂಬಾ ರಷ್ ಆಗಿ ತುಂಬಾ ಕಷ್ಟಪಟ್ಟು ನಿಮಗು ನಿಮ್ಮ ಮನೆಯವರಿಗೆ ಎರಡು ಟಿಕೇಟ್ ಕೊಳ್ಳಲು ಸಾಕುಸಾಕಾಯ್ತು ಸಾರ್. ಅಲ್ಲದೇ ಬೆಳಿಗ್ಗೆಯಿಂದ ತಿಂಡಿ ಸಹ ತ್ತಿನ್ನಲಿಲ್ಲ ಸಾರ್.

"ಬಸಪ್ಪ ನೀನ್ ಎರಡು ಟಿಕೇಟ್ ಕೊಂಡು ಕೊಟ್ಟಿದಕ್ಕೆ ತುಂಬಾ ಉಪಕಾರವಾಯ್ತು ಥ್ಯಾಂಕ್ಸ್ ಕಣಯ್ಯ. ಸರಿಸರ್, " ಸಾರ್ ನಾನ್ ಹೇಳಿದ್ದ ಕೆಲಸದ ವಿಶಯ ಏನಾಯ್ತು ಸಾರ್"

ಅಯ್ತಾಯ್ಯ, "ನಿನ್ನ ಮಗನ ಕೆಲಸದ ವಿಷಯತಾನೆ?"

" ಸಾರ್ ತುಂಬಾ ಉಪಕಾರವಾಯ್ತು ಸಾರ್." ಅಪ್ಪಾ ಪೋನ್ ಇಟ್ಟತ್. ಅಲ್ಲಾ ನಾನ್ ಎಷ್ಟು ಗಾಬರಿಯಾಗಿದ್ದೆ, ವಿನಾಕಾರಣ. ಅಪ್ಪನ ಮೇಲೆ ಅನುಮಾನ ಪಟ್ಟೆ, ಸಮಾಧಾನ ಮಾಡಿಕಂಡ್. ಉಪೇಂದ್ರ filmನೋಡಿಕಂಡ್ ಮನೆಗೆ ಬಾಕನ ಮನೆಯ ವಾತಾವರಣನೇ ಬೇರೆಯಾಗಿತ್. ಮನೆ ಮುಂದೆ ತುಂಬಾ ಜನ ಸೇರಿದ್ದೊ ಯಾಕೆ? ಏನ್? ಎತ್ತಾತ್ತಾ ಯಾರ್ ಹೇಳ್‌ತ್ ಇಲ್ಲೆ. ಜನರ ಮಧ್ಯ ಸತೀಸ ನುಸುಳಿಕಂಡ್ ಒಳಗೆ ಬರುವಷ್ಟರಲ್ಲಿ ಸೀತಾ, ಗೀತಾ, ಅವ್ವನ ಬೊಬ್ಬೆ ಜೋರ್ ಕೇಳ್‌ತಿತ್. ಸತೀಸಂಗೆ ಆಶ್ಚರ್ಯ ಕಾದಿತ್ ಅಪ್ಪಂಗೆ ಆಕ್ಸಿಡೆಂಟ್ ಆಗಿ ಅಪ್ಪ ಅಮ್ಮನ ಮಕ್ಕಳ ಬುಟ್ಟು ಇಹಲೋಕ ಸೇರಿದ್ದೋ. ಸತೀಸಂಗೆ ತನ್ನ ಜಂಗಾಬಲವೇ ನುಂಗಿದಂಗೆ ನಿಂತಲೇ ಆತ್. ನಾನ್ ಈಗ ಏನು ಮಾಡೋದೋ, ಏನು ಮಾಡೋದೋ, ಹೇಳಿಕಂಡ್ ಕಣ್ಣೀರ್ ಹಾಕಿತ್. ನಮ್ಮಂತವುಕ್ಕೆ ಹಿಂಗೇ ಅತ್ತಾಲ್ಲತ್ತಾ ಕಣ್ಣೀರ್ ಸುರಿತ್. ಅವ್ವಾ ಸಮಾಧಾನ ಮಾಡಿಕಂಡತ್. ಒಬ್ಬ ಮನುಷ್ಯಂಗೆ ಸರಕಾರಿ ಕೆಲಸದಲ್ಲಿ ಇದ್ದರೆ ಮಾತ್ರ ಮರ್ಯಾದೆ ಕೊಟ್ಟವೇ ಆದರೆ ಸತ್ತಮೇಲೆ ಯಾರ್ ಏನುತ್ತಾ ಗೊತ್ತಾದುಲ್ಲೆ ಇದ್ ಸಮಾನ್ಯ ಸಮಾಜದಲ್ಲಿ ನಡೆಯುವ ಒಂದು ಘಟನೆ, ಸರ್ವಸಾಮಾನ್ಯ.

ಸತೀಸಂಗೆ ಜೀವನ ಹಾದಿಯ ಮುಂದೆ ಹೆಜ್ಜೆ ಹಾಕುದು ಹೇಗೆತ್ತಾ ಗ್ಯಾನ ಮಾಡಿರೆ ತುಂಬಾ ಬೇಸರ ಆಗ್‌ತ್ತಿತ್. ಜನ ಅವರಿಗೆ ಸಮಾಧಾನ ಹೇಳುತ್ತಿದ್ದೊ. ಒಂದು ದಿನ ಸತೀಸಂಗೆ Post ಬಾತ್ ಇದ್ ಯಾರ್‌ದ್ ಆಗಿರುದುತ್ತಾ! ಒಡೆದು ನೋಡಿರೆ! ಅದು ಸತೀಸಂಗೆ ಅಪ್ಪನ ಆಫೀಸ್‌ಯಿಂದ, ಸತೀಸಂಗೆ ಗುಮಾಸ್ತ ಕೆಲಸಕ್ಕೆ ಆರ್‌ಡರ್(Order) ಬಂದಿತ್ತು. ಒಂದು ರೀತಿಲೇ ಸತೀಸಂಗೆ ಖುಷಿಯಾದರೇ ಇನ್ನೊಂದು ರೀತಿಲೀ ಬೇಸರ ಆಗ್‌ತಿತ್ತು. ಈಗ ಸತೀಸಂಗೆ ಮನೆಯ ಜವಾಬ್ದಾರಿ ಎಲ್ಲ ಅವನದ್ದೇ ಆಗಿತ್. ಜೀವನದ ದಾರಿಗೆ ಹೆಜ್ಜೆ ಹಾಕಿತ್ ಅಂತೂ ಒಂದು ಸರಕಾರಿ ಉದ್ಯೋಗ ಸಿಕ್ತ್.

-- ಆಜಡ್ಕ ರಾಣಿ ಬಾಲಕೃಷ್ಣ, ಕುಶಾಲನಗರ.

---

ಗುಣಗಳನ್ನು ನೋಡಿ ದುರ್ಗುಣಗಳನ್ನು ನೋಡಬೇಡಿ.

# ಸಂಗಾತಿ ಪದ ಬಂಧ – ೧ರ ಉತ್ತರ

— *ಸಿಂಚನ*

ಮನೆ ಹೆಸರನ್ನು ಗುರ್ತಿಸಿ

| | | | | | | | | | | |
|---|---|---|---|---|---|---|---|---|---|---|
| 1 ಪಂ | ಜ | ದ | | 2 ಆ | 3 ಜ | ಡ್ಕ | | 4 ರ | ಬ್ಬೀ | 5 ಬ |
| ಜಿ | | | 6 ಚೀ | | ಪ್ಪೆ | | 7 ಕಂ | | | ಟ್ಯ |
| 8 ಪ | ಳಂ | ಗಾ | ಯ | | ಗೋ | | 9 ಜ | ತ್ತ | ಣ್ಣ | ನ |
| ಳ್ಳ | | | ಪ್ಪ | | ವೆ | | ನ | | | |
| | 10 ಕು | ಟ್ಟ | ನ | | | 11 ಊ | | 12 ಮೂ | ವ | ನ |
| | ಲ್ಲ | | | | | ರೋ | | ಲೆ | | |
| 13 ಪೀ | ಚೆ | ಮ | ನೆ | | 14 ಕ | ಳ | ಗೆ | ಮ | ನೆ | |
| | ಟ್ಟಿ | | | | | ನ | | ನೆ | | 15 ಶಿ |
| 16 ನ | ರ | ವಾ | ಳು | ಉ | | | | | | ರಾ |
| | | | | | | | 17 ಕು | ದು | ಪ | ಜೆ |

— ಅಚ್ಚಲ್ಪಾಡಿ ಕವಿತ ಬೋಜಪ್ಪ, ಕಾಟಕೇರಿ.

17 ನೇ ಪುಟದಿಂದ

ನನ್ನ ಮದುವೆ ಆಗುವ ಗಂಡುಕಣ್ರೇ. ಅದೇ ಆವತ್ತು ನನ್ನ ನೀರಿನಿಂದ ಎತ್ತಿ ತಂದ್ ಪ್ರಾಣ ಉಳ್ಸಿ ಬುಟ್ಟು ಹೋಗಿದ್ರಲ್ಲಾ? ಅದೇ ಮನುಷ್ಯ ಕಾಣ್ರೇ ಇವರು. ಬರುವ ವಾರ ತಾ. 25ಕ್ಕೆ ನನ್ನ ಮದುವೆ ಇವರ ಜೊತೆಲಿ ಆಗುತ್ತದೆ. ಈ ವಿಷ್ಯನ ತ್ರಿಳ್ಸಿಹೋಕೆ ಅವು ನನ್ನ ಹತ್ರ ಆ ತರದ ವೇಷಹಾಕಂಡ್ ಬಂದದ್. ಹೆಂಗಿದ್ದಾರೆ ನಿಮ್ಮ ಬಾವನವರು? ಚೆಂದ ಇದ್ದಾರ? ಅಂತ ಹೇಳಿಕಂಡ್ ತಿರುಗಿ ಆ ರೂಂ ಕಡೆಗೆ ಎಲ್ಲವೂ ಒಟ್ಟಿಗೆ ಬಂದಿದ್ದ ಹೊಸ ಬಾವನ ಮುಖನ ನೋಡಿಕೆ, ಒಳಗಡೆಗೆ ಇಣಕಿದೊ. ಅಯ್ಯೋ! ಎಷ್ಟೊತ್ತಿಗೆ ಇವರು ಹೊರಗೆ ಹೊರಟ್ ಹೋದ್. ನಮ್ಮ ಕಣ್ಣಿಗೆ ಕಾಣದಂಗೆ ಮಾಯಾಗಿ ಹೋಗಿಬುಟ್ಟಲ್ಲಾ? ತೇಳಿ ಬೀದಿಕಡೆ ನೋಡಿಕೆ ಹೊರಗೆ ಓಡಿ ಬಂದೊ. ಆದ್ರೇ ಆ ಬೀದಿ ಉದ್ದಕ್ಕೂ ಇವು ಎಲ್ಲೂ ಕಾಂಬದಿಲ್ಲೆ! ಹೋಗ್ಲಿ ಬನ್ರೇ, ಸದ್ಯಕ್ಕೆ ಅವರು ನಿಮಗೆಲ್ಲಾ ಪರಿಚಯ ಮಾಡಿಕೊಳ್ಳೊಲ್ಲ, ಯಾಕೆಂದ್ರೆ ಈ ಮದುವೆ ತುಂಬಾ ಗುಟ್ಟಾಗಿ ನಡೀ ಬೇಕು ಆಯ್ತಾ?ಸದ್ಯ ಈವಾಗ ನನ್ನೊಬ್ಬನ ಮದುವೆ ಒಂದು ನಡೆದು ಹೋದ್ರೆ ಮುಂದಕ್ಕೆ ನಿಮ್ಮ ಇಬ್ಬರ ಮದುವೆನ ಮಾಡಿಕೆ ನಮ್ಮ ಪಪ್ಪಂಗೆ ಕಷ್ಟ ಆದ್‌ಲೆ. ಆದ್ರಂದ ನನ್ನ ಮದುವೆ ಗುಟ್ಟಾಗೆ ಆಗ್ಲೀ. ನೀವು ಧೈರ್ಯಆಗಿ ಇರಿ ಈ ವಿಚಾರನ ನಮ್ಮ ಪಪ್ಪಂಗೆ, ಅಮ್ಮಂಗೆ ಯಾವ ಜನಕ್ಕೂ ತಿಳ್ಸದು ಬ್ಯಾಡ. ಎಲ್ಲಾನ ನಾನೇ ನಿಧಾನಕ್ಕೆ ತ್ರಿಳ್ಸಿನೆ. ಈಗಲೇ ನಾವು ಆತುರ ಮಾಡಿರೆ ಆಗುವಂತಹ ಕಾರ್ಯಕೆ ಕಲ್ಲ್ ಬಿದ್ದಂಗೆ ಆದೆತ್ತೇಳಿ ಶಾಂತಿ ಅವಳ ತಂಗೆಕ್ಕಗಳ ಸಮಾಧಾನ ಮಾಡ್ತ್. ಈ ಆಶ್ಚರ್ಯಕರವಾದ ಸಮಾಚಾರ ಕೇಳ್ದ ಶಾಂತಿ ಗೂಡೆನ ತಂಗೆಗಳಿಗೆ ತುಂಬಾ ಖುಷಿ ಆಗಿ ಹೋತ್.

ಸರಿಯಾದ ಅಡ್ರಾಸ್‌ಗೊತ್ತಿಲ್ಲದೇ ತುಂಬಾ ಕಳವಳದಿಂದ ಶಾಂತಿಗೂಡೆನ ಹುಡಿಕಿಕೆ ಹೋದ ಮಿಸ್ಟರ್ ರಾಜುಗೆ ಅದೃಷ್ಟವಶಾತ್ ಅವಳನ್ನ ಕಂಡ್‌ಹಿಡ್ದ್ ಮನಪೂರ್ವಕವಾಗಿ ಅವಳೊಟ್ಟಿಗೆ ಮಾತಾಡಿ ಬಾಕೆ ಅವಕಾಶ ಸಿಕ್ಕಿದಕ್ಕಾಗಿ ರಾಜು ಬಹಳ ಖುಷೀಲಿ ಅವಳನ್ನ ಬೀಳ್ಕಂಡ್ ಆ ಗಲ್ಲಿಂದ ನೆಟ್ಟೆಂಗೆ ಮೇಯಿನ್ ರೋಡ್ ಕಡೆಗೆ ನಡ್ತ್.

*(...ಮುಂದುವರ್ದದೆ.)*

ವಸ್ತುವಿಲ್ಲದ ಅಲಂಕಾರವೂ, ತುಪ್ಪವಿಲ್ಲದ ಭೋಜನವೂ, ಮಾನವಿಲ್ಲದ ಹೆಂಗಸು, ವಿದ್ಯೆ ಇಲ್ಲದ ಜೀವನವೂ ವ್ಯರ್ಥಗಳು

## ಜ್ಯೋತಿಷ್ಯ ಶಾಸ್ತ್ರಕಲಿಯುವರಿಗೊಂದು ಸುವರ್ಣಾವಕಾಶ

ನಮ್ಮಲ್ಲಿ ಜ್ಯೋತಿಷ್ಯಶಾಸ್ತ್ರ ಕಲಿಯಲು ಉತ್ಸಾಹ ಇರುವ ಹುಡುಗ ಹುಡುಗಿಯರಿಗೆ ಒಂದು ವರ್ಷದ ಅವಧಿಯಲ್ಲಿ ಜ್ಯೋತಿಷ್ಯಶಾಸ್ತ್ರದ ವಿಷಯವನ್ನು ಕಲಿಸಿಕೊಡಲಾಗವುದು.

ವಿಷಯ :- ಜಾತಕ ನೋಡಲು, ವಧುವರರ ಸಾಲಾವಳಿ, ಮುಹೂರ್ತ,ಹೊಸಮನೆಗಳಿಗೆ ಪಂಚಾಂಗ, ಜಲನೋಡಲು ಮತ್ತು ಇನ್ನಿತರ ಹಲವಾರು ಸೂಕ್ಷ್ಮ ವಿಷಯಗಳನ್ನು ಕಲಿಸಿ ಕೊಡಲಾಗುವುದು. ಮಾರ್ಚ 20ರೊಳಗೆ ಖುದ್ದಾಗಿ ಭೇಟಿಯಾಗುವುದು. ಈ ಬಗ್ಗೆ ಪತ್ರ ವ್ಯವಹಾರ ಇರುವುದಿಲ್ಲ.

**ಗುತ್ತಿಮುಂಡನ ಗಿರೀಶ್‌ಕುಮಾರ್**
ಜ್ಯೋತಿಷ್ಯ ಮತ್ತುವೈದ್ಯರು,C/o ಮರಗೋಡು ಗೌಡ ಸಮಾಜ
ಐಕೋಳ, ಮರಗೋಡು ಅಂಚೆ, ಮಡಿಕೇರಿ ತಾ. ಕೊಡಗು.
ದೂರವಾಣಿ : 958272/34468 (ಮನೆ)

## ಗಾಳಿ ಗೋಪುರ ಬೇಡ

ಭೂಮಿ, ಸೂರ್ಯ, ಚಂದ್ರ, ನಕ್ಷತ್ರ ಎಲ್ಲಾವು ಕ್ರಮಲಿ ಸುತ್ತುತ್ತಿದ್ದವೆ. ಅವು ಸುತ್ತಿದ ದಾರಿನ ಗುರ್ತು ಮಾಡಿ ತಾದುಲೆ. ಸೂರ್ಯ ಹಗಲ್ ಬೆಳಕ್ ಕೊಟ್ಟದೆ. ರಾತ್ರೆ ಅವನ ಪತ್ತೆ ಇರ್ದುಲೆ. ಸೂರ್ಯ ತಾನು ಮಾಡ್ಟು ಕೆಲ್ಸಕ್ಕೆ, ತಾನ್ ಮಾಡ್ಟು ಸೇವೆಗೆ ಗಾಳಿ ಗೋಪುರ ಕಟ್ಟಿಕೆ ಇಷ್ಟಪಡ್ದುಲ್ಲೆ. ಯಾರು ಕಟ್ಟುದುಲೆ. ಹಂಗೆನೆ ಭೂಮಿ, ಚಂದ್ರ, ನಕ್ಷತ್ರ ಸ. ಮನುಷ್ಯ ಇದರ್‌ಂದ ಬುದ್ಧಿ ಕಲಿಯಕು. ನಮ್ಮ ಬದ್ಕು ಸ್ವಲ್ಪ ಕಾಲ ಮಾತ್ರ. ತಾನ್ ಮಾಡ್ಟು ಕೆಲ್ಸಸನ ತುಂಬಾ ಕಮ್ಮಿ ಸಮಯಲಿ ಮಾಡಿ ಮುಗಿಸೋಕು. ಮನ್‌ಷ ಹುಟ್ಟಿದ್ದಕ್ಕಾಗಿ ತನ್ನ ಕರ್ತವ್ಯ ಮಾಡಕು. ಮಾಡ್ಟು ಕೆಲ್ಸಕ್ಕೆ ಗಾಳಿ ಗೋಪುರ ಕಟ್ಟಿಕ್ಕೆ ಪ್ರಯತ್ನ ಪಟ್ಟದೆ. ಈ ನಾನ್ ಬಯಕೆನ ಇಟ್ಟು ಕಂಬದು ಮನುಷ್ಯತ್ವ ಅಲ್ಲ. ಬರಿ ಕೈಲಿ ಬಂದ್ ಬರಿಕೈಲಿ ಹೊದೆ. ಯಾವ ಗಾಳಿಗೋಪುರ ಅವನ ಒಟ್ಟಿಗೆ ಹೊದೆ?

ಕೊಡವಭಾಷೆಯಲ್ಲಿ : **ಚೇಂದ್ರಿಮಾಡ ಮುತ್ತಪ್ಪ**
ಅರೆಭಾಷೆಗೆ : **ಪಟ್ಟಡ ಪ್ರಭಾಕರ**

## *ಕೊಡಗು ಸಂಗಾತಿ ಓದುಗರ ಗಮನಕ್ಕೆ*

ನಿಮ್ಮ ಆತ್ಮೀಯ ಬಂಧುಗಳು, ಸ್ನೇಹಿತರು, ಉದ್ಯೋಗಾರ್ಥವಾಗಿ ವಿದೇಶಗಳಿಗೆ ತೆರಳಿದ್ದಲ್ಲಿ ಅಂಥವರ ಸರಿಯಾದ ವಿಳಾಸವನ್ನು 25 ಪೈಸೆಯ ಅಂಚೆ ಕಾರ್ಡಿನಲ್ಲಿ ನಮೂದಿಸಿ ಕೊಡಗು ಸಂಗಾತಿಗೆ ಕಳುಹಿಸಿ ಕೊಡುವುದು. ಜೊತೆಗೆ ನಿಮ್ಮ ಪೂರ್ಣವಿಳಾಸವು ಸಹ ಇರಲಿ.

ವಿಳಾಸ : ಸಂಪಾದಕಿ, ಕೊಡಗು ಸಂಗಾತಿ, ನಂ. 35, "ಸವಿತಾ ನಿಲಯ"1ನೇ ಕ್ರಾಸ್,
4ನೇ ಬ್ಲಾಕ್, ಜಯಲಕ್ಷ್ಮಿಪುರಂ. ಮೈಸೂರು - 570 012 ✆ : **95821 - 516771**

## ನಿಧನ

● ಕಟ್ಟೆಮಾಡು ಗ್ರಾಮದ ತೋಟಂಬೈಲು ದಿ|| ಈರಪ್ಪನವರ ಪ್ರಥಮ ಪುತ್ರ ರಾಘವೇಂದ್ರ (ಮೋಹನ್)ನವರು ದಿನಾಂಕ 27-1-2001ನೇ ಶನಿವಾರ ದಿನ ವೈಕುಂತವಾಸಿಯಾದರು. ಇವರಿಗೆ 46 ವರ್ಷ ಪ್ರಾಯವಾಗಿತ್ತು. ಇವರು ಪತ್ನಿ,ತಾಯಿ ಹಾಗೂ ಒಬ್ಬ ಪುತ್ರ, ಇಬ್ಬರು ಪುತ್ರಿಯರನ್ನು ಮತ್ತು ಅಪಾರ ಬಂಧು ವರ್ಗವನ್ನು ಆಗಲಿದ್ದಾರೆ.

● ಹೊಸ್ಕೇರಿ ಗ್ರಾಮದ ಮುಕ್ಕಾಟಿ (ಪಲ್ಲತ್ತಿ) ಕರುಂಬಯ್ಯನವರ ಮಗ ಮನೋಹರ ಇವರು ದಿನಾಂಕ 2-2-2001 ನೇ ಶುಕ್ರವಾರ ದಿನ ದೈವಾದೀನರಾದರು. ಇವರಿಗೆ 40 ವರ್ಷ ಪ್ರಾಯವಾಗಿತ್ತು. ಇವರು ಪತ್ನಿ, ಇಬ್ಬರು ಪುತ್ರಿಯರು, ತಂದೆ,ತಾಯಿ, ಮತ್ತು ಅಪಾರ ಬಂಧು ವರ್ಗವನ್ನು ಆಗಲಿದ್ದಾರೆ.

## ವಾಲಿಬಾಲ್ ಪ್ರತಿಭೆ ಕೊಂದಳನ ಗಗನ್ ಪೂಣಚ್ಚ



2000 ನೇ ನವೆಂಬರ್‌ನಲ್ಲಿ ಕೋಲಾರದಲ್ಲಿ ನಡೆದ ರಾಜ್ಯಮಟ್ಟದ ವಾಲಿಬಾಲ್ ಸ್ಪರ್ಧೆಯಲ್ಲಿ ಭಾಗವಹಿಸಿ ಕೀರ್ತಿತಂದ ಕೊಂದಳನ ಗಗನ್ ಪೂಣಚ್ಚನನ್ನು ಮೈಸೂರು ಮಹಾಜನ ವಿದ್ಯಾಸಂಸ್ಥೆಯ ಅಧ್ಯಕ್ಷರಾದ ಶ್ರೀ ವಾಸುದೇವ ಮೂರ್ತಿಯವರು ಪ್ರಶಸ್ತಿ ಪತ್ರ ನೀಡಿ ಅಭಿನಂದಿಸುತ್ತಿರುವುದು.

ಈ ಬಾಲ ಪ್ರತಿಭೆಯು ಮೂಲತಃ ಮಡಿಕೇರಿ ತಾಲೋಕು ಕಾಲೂರು ಗ್ರಾಮದ ಕೊಂದಳನ ಪೂಣಚ್ಚ ಮತ್ತು ಪೊನ್ನಮ್ಮ ದಂಪತಿಗಳ ಏಕೈಕ ಮಗ ಗಗನ್ ಹುಟ್ಟಿದ್ದು 15-3-1988 ರಲ್ಲಿ. ಈತ ಮೈಸೂರಿನ ಮಹಾಜನ ವಿದ್ಯಾಸಂಸ್ಥೆಯಲ್ಲಿ ಈಗ 7ನೇ ತರಗತಿಯ ವಿದ್ಯಾರ್ಥಿ ಯಾಗಿರುತ್ತಾನೆ.



ರಾಜ್ಯಮಟ್ಟದ ವಾಲಿಬಾಲ್ "2000"ದ ಸ್ಪರ್ಧೆಯಲ್ಲಿ ಭಾಗವಹಿಸಿ ತನ್ನ ಪ್ರಶಸ್ತಿಯೊಂದಿಗೆ ಗಗನ್

2000 ನೇ ಇಸವಿ ನವೆಂಬರ್‌ನಲ್ಲಿ ಕೋಲಾರದ ಬಾಗೇಪಲ್ಲಿಯಲ್ಲಿ ನಡೆದ ಕರ್ನಾಟಕ ರಾಜ್ಯ ಮಟ್ಟದ ವಾಲಿಬಾಲ್ ಪಂದ್ಯಾವಳಿಯಲ್ಲಿ ತಾನು ಓದುತ್ತಿರುವ ಮೈಸೂರಿನ ಮಹಾಜನ ವಿದ್ಯಾಸಂಸ್ಥೆ ವತಿಯಿಂದ ಆಯ್ಕೆಯಾಗಿ ಭಾಗವಹಿಸಿ ತನ್ನ ಅತ್ಯುತ್ತಮ ಬಾಲ ಪ್ರತಿಭೆಯನ್ನು ಪ್ರದರ್ಶಿಸಿ ತನ್ನ ಸಂಸ್ಥೆಗೆ ಕೀರ್ತಿ ತಂದಿರುತ್ತಾನೆ.

ಈತನಿಗೆ ಸಂಸ್ಥೆಯ ದೈಹಿಕ ಶಿಕ್ಷಕರಾದ ಶ್ರೀ ಮುರುಳಿಯವರ ಗರಡಿಯಲ್ಲಿ ವಾಲಿಬಾಲ್ ಆಟದಲ್ಲಿ ಪಳಗುತ್ತಿರುವ ಇವನು ಪ್ರತಿಭಾವಂತ ಬಾಲ ಕಿಶೋರನಾಗಿದ್ದಾನೆ. ಈತನಿಗೆ ತನ್ನ ಸೋದರ ಮಾವಂದಿರಾದ ಜತ್ತಣ್ಣನ ಉಲ್ಲಾಸ ಸಹೋದರರ ಸಲಹೆ ಸಹಕಾರ ಅಪೂರ್ವವೆಂದು ನೆನೆಯುತ್ತಾನೆ ಈ ಚಿಕ್ಕ ಪೋರ. ಜೀವನದಲ್ಲಿ ನಿನ್ನ ಗುರಿ ಏನು? ಎಂದು ಸಂಗಾತಿ ಕೇಳಿದ್ದಕ್ಕೆ ನನ್ನ ಗುರಿ ರಾಷ್ಟ್ರಮಟ್ಟದಲ್ಲಿ ಮತ್ತು ಅಂತರಾಷ್ಟ್ರೀಯ ಸ್ಪರ್ಧೆಯಲ್ಲಿ ಭಾಗವಹಿಸುವುದು ಎಂದು ಚುಟುಕಾಗಿ ಉತ್ತರ ನೀಡಿದ. ಸದ್ಯ ಮೈಸೂರಿನ ಹಿನ್‌ಕಲ್‌ನಲ್ಲಿ ತನ್ನ ತಾಯಿಯ ಆಶ್ರಯದಲ್ಲಿ ಓದುತ್ತಿರುವ ಹಾಗೂ ವಾಲಿಬಾಲ್ ಕ್ರೀಡೆಯಲ್ಲಿ ಅಪಾರ ಆಸಕ್ತಿ ಇರುವ ಈ ಪುಟ್ಟ ಚೋಟಿ ಬಾಲಕನಿಗೆ ಕುಲದೇವ್ರು ವೆಂಕಟರಮಣನ ಮತ್ತು ಶೃಂಗೇರಿ ತಾಯಿಯ ಕೃಪಾ ಕಟಾಕ್ಷೆ ಇದ್ದು, ತನ್ನ ಹೆತ್ತವರಿಗೂ, ನಾಡಿಗೂ ಜನಾಂಗಕ್ಕೂ ಕೀರ್ತಿ ತರಲೆಂಬುದಾಗಿ ಕೊಡಗು ಸಂಗಾತಿ ಈ ಸಂದರ್ಭದಲ್ಲಿ ಶುಭವನ್ನು ಹಾರೈಸುತ್ತದೆ.

ಬರಹ : ಪಟ್ಟಡ ಪ್ರಭಾಕರ

## ಶುಭ ವಿವಾಹ

ಮಡಿಕೇರಿ ತಾಲ್ಲೂಕು ಅರ್ವತೋಕ್ಲು ಗ್ರಾಮದ ಶ್ರೀ ಮೂಟೇರ ಮುದ್ದಪ್ಪನವರು ಈಗ ಹಾಲಿ ದೆಹಲಿ ನಿವಾಸಿ ಇವರ ಮಗ ವಿನೋದ್ ಕುಮಾರ್‌ನಿಗೂ ಮತ್ತು ಭಾಗಮಂಡಲ ಸಣ್ಣಪುಲಿಕೋಟು ಗ್ರಾಮದ ಕುಯ್ಯಮುಡಿ ವಸಂತ ಈಗ ದೆಹಲಿ ನಿವಾಸಿ ಇವರ ಮಗಳು ಪವಿತ್ರಳಿಗೂ ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣ ಮಂಟಪದಲ್ಲಿ ದಿನಾಂಕ 28-1-2001 ರಂದು ವಿವಾಹವು ವಿಜೃಂಭಣೆಯಿಂದ ನಡೆಯಿತು.

ಕೊಡಗಿನ ಕರಿಕೆ ಗ್ರಾಮದ ಈಗ ಹಾಲಿ ಮೈಸೂರು ನಿವಾಸಿ ಅಮೆಮನೆ ಶಿವರಾಯ್ ಇವರ ಮಗಳು ಅಶ್ವಿನಿ ರಾಯ್ ಮತ್ತು ಮಡಿಕೇರಿ ಸ್ಟಿವರ್ಟ್ ಹಿಲ್ಲ್ ನಿವಾಸಿ ತೇನನ ಸೋಮಣ್ಣನವರ ಮಗ ರಾಜೇಶ್‌ಗೂ ದಿನಾಂಕ 4-2-2001ರಂದು ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣ ಮಂಟಪದಲ್ಲಿ ಭಾರಿ ವಿಜೃಂಭಣೆಯಿಂದ ವಿವಾಹವು ಜರುಗಿತು.

ಚೆಟ್ಟಳ್ಳಿ ಗ್ರಾಮದ ಪೇರಿಯನ ಜಯಾನಂದ ಇವರ ಮಗಳು ಚಿಂತನ ಮತ್ತು ಸುಳ್ಯ ತಾಲ್ಲೋಕು ಮಾಣಿಚಿಟ್ಟು ಪುರುಷೋತ್ತಮ ಗೌಡರ ಮಗ ಸುಬ್ರಮಣ್ಯ ಇವರ ವಿವಾಹವು ದಿನಾಂಕ 09-2-2001 ರಂದು ಮಡಿಕೇರಿಯ ಕೆಳಗಿನ ಗೌಡ ಕಲ್ಯಾಣ ಮಂಟಪದಲ್ಲಿ ವಿಜೃಂಭಣೆಯಿಂದ ನಡೆಯಿತು.

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ✆ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ✆ : 0821/431792.